ಸಹಕಾರ ಸಾಹಿತ್ಯ : ೧ * * * * *

ನೆದರ್ಲಂಡಿನಲ್ಲಿಯ

# ಸಹಕಾರದ ನಸು-ನೋಟ


ಲೇಖಕರು :-

ಬಿ. ವಿ. ಪಾಟೀಲ, ಎಂ. ಎ. ಜಿ. ಡಿ. ಸಿ. ಆ್ಯಂಡ ಎ.,

ಎಫ್. ಆರ್. ಇ. ಎಸ್. (London) ಡೆಪ್ಯೂಟಿ ರಜಿಸ್ಟ್ರಾರ, ಸಹಕಾರಿ

ಸಂಘಗಳು ಮುಂಬಯಿ ರಾಜ್ಯ.



೧೯೫೩ ... .... ... ಬೆಲೆ: ೧-೧೨-೦

ಸಹಕಾರಿ ಸಾಹಿತ್ಯ : ೧ ★ ★ ★ ★ ★

# ನೆದರ್ಲಂಡಿನಲ್ಲಿಯ

# ಸಹಕಾರದ ನಸು-ನೋಟ

ಲೇಖಕರು :-

ಬಿ. ವಿ. ಪಾಟೀಲ, ಎಂ. ಎ. ಜಿ. ಡಿ. ಸಿ. ಆ್ಯಂಡ ಎ.,
ಎಫ್. ಆರ್. ಇ. ಎಸ್. (London) ಡೆಪ್ಯೂಟಿ ರಜಿಸ್ಟ್ರಾರ, ಸಹಕಾರಿ
ಸಂಘಗಳು ಮುಂಬಯಿ ರಾಜ್ಯ.

ಅನುವಾದಕರು.-
ಈಶ್ವರ ಮ. ಸಣಕಲ್ಲ

೧೯೫೩ ... .... ... ಬೆಲೆ: ೧-೧೨-೦

ಅಜಿತ ಪ್ರಕಾಶನ, ಬೆಳಗಾವಿ.

ಕನ್ನಡ ನಾಡಿನ

ನೇಗಿಲ ಯೋಗಿಗಳಿಗೆ

ಇದೊಂದು

ನಮಿಪ್ಪೆ.

ದರಿಂದ ಇಲ್ಲಿ ನಾನು ರೇಖಿಸಿದ ಚಿತ್ರವು ನಿರ್ದೋಷವೂ ಕಲಾಪೂರ್ಣವೂ ಆಗಿದೆಯೆಂದು ಹೇಳಲಾರೆ. ಆದರೂ ನನ್ನ ಮನಸ್ಸಿನ ಮೇಲೆ ಮೂಡಿದ ಚಿತ್ರವನ್ನು ಇಲ್ಲಿ ಶಕ್ಯವಿದ್ದಷ್ಟು ಸರಿಯಾಗಿ ರೇಖಿಸಲು ಯತ್ನಿಸಿರುವೆ. ನನಗಿದ್ದ ಅವಧಿಯು ಅತ್ಯಲ್ಪವಾಗಿದ್ದರೂ, ಭಾಷೆಯ ತೊಂದರೆಯು ಮುಂದೆ ನಿಂತರೂ 'ಫೆಲೋಶಿಪ್' ಆಫೀಸರರು ಅಲ್ಲಿ ನನಗೆ ನೀಡಿದ ನೆರವನ್ನೂ, ನನ್ನ ಸಲುವಾಗಿ ಪಟ್ಟ ಪರಿಶ್ರಮವನ್ನೂ ಎಂದೂ ಮರೆಯಲಾರೆ. ಒಂದು ಸುವ್ಯವಸ್ಥಿತವಾದ ಕಾರ್ಯಕ್ರಮವನ್ನೇರ್ಪಡಿಸಿ, ಎಲ್ಲ ಬಗೆಯ ನೆರವು ನೀಡಿ ನನ್ನ ಸಹಕಾರದ ಅಭ್ಯಾಸಕ್ಕೆ ಅಗತ್ಯವಿರುವ ಎಲ್ಲ ವಸ್ತು ವಿಷಯ ಟಿಪ್ಪಣಿಗಳನ್ನು ಒದಗಿಸಿ, ನನ್ನ ಮೇಲೆ ಒಂದು ಉಪಕಾರದ ಹೊರೆಯನ್ನೇ ಹೊರಿಸಿರುವರು. ಆದುದರಿಂದ ಅವರಿಗೂ ಮತ್ತು ನನ್ನ ಅಭ್ಯಾಸದ ಪ್ರವಾಸವು ಯಶಸ್ವಿಯಾಗುವಂತೆ ಎಲ್ಲ ಬಗೆಯ ದಕ್ಷತೆ ವಹಿಸಿ, ಶ್ರಮ ಪಟ್ಟ ಅವರ ಅಸಿಸ್ಟಂಟರು ಅಂದರೆ ಸಹಾಯಕರಿಗೂ ನಾನು [illegible] ಋಣಿಯಾಗಿರುವೆ. ಅಲ್ಲದೆ ನನ್ನನ್ನು ಆ ದೇಶದಲ್ಲಿ ಸ್ನೇಹ [illegible]ದಿಂದ ಸ್ವಾಗತಿಸಿ, ಎಲ್ಲ ರೀತಿಯಿಂದ ಸಹಾಯಕರಾಗಿ ನಿಂತ ಅಲ್ಲಿ[illegible] ಸದ್ಗೃಹಸ್ಥರಿಗೂ, ಇನ್ನಿತರರಿಗೂ ನಾನು ಕೃತಜ್ಞನು.

ಇದು ನನ್ನ ನೆದರ್‌ಲಂಡ ಪ್ರವಾಸದ ಕತೆಯಾಯಿತು. ಇನ್ನು ಅಲ್ಲಿಯ ಸಹಕಾರಾಂದೋಲನದ ಚಿತ್ರವನ್ನು ಇಲ್ಲಿ ನಮ್ಮ ಭಾರತೀಯರಿಗೆ, ವಿಶೇಷವಾಗಿ ನಮ್ಮ ಕನ್ನಡಿಗರಿಗೆ ತೋರಿಸಬೇಕೆಂಬ ನಿಮ್ಮ ಉದ್ದೇಶದ ರಹಸ್ಯವೇನು ಎಂದು ಯಾರಾದರೂ ಕೇಳಬಹುದು. ಈ ಪ್ರಶ್ನೆಗೆ ನಾನು ಕೊಡುವ ಉತ್ತರವಿಷ್ಟೇ 'ದಯವಿಟ್ಟು ಈ ಪುಸ್ತಕವನ್ನು ಓದಿ ಇದರಲ್ಲಿ ಮೂಡಿಸಿದ ಚಿತ್ರವನ್ನು ನಮ್ಮ ಭಾರತದ ಒಕ್ಕಲಿಗರ ಚಿತ್ರಕ್ಕೆ ಸರಿಹಚ್ಚಿ ನೋಡಿ! ಆಗ ಇದರ ಪ್ರಕಟಣೆಯ ಆವಶ್ಯಕತೆಯ ಉಪಯುಕ್ತತೆಯ ಕಲ್ಪನೆ ಯಾದೀತು.'

ನಮ್ಮ ಭಾರತದ ಅರ್ಥರಚನೆಯಲ್ಲಿ, ಅರ್ಥಶಾಸ್ತ್ರದಲ್ಲಿ ಒಕ್ಕಲುತನವು ಭಾರತದ ಬೆನ್ನೆಲುಬಾಗಿದೆ. ನಮ್ಮ ಭಾರತದ ಒಟ್ಟು ಜನಸಂಖ್ಯೆಯಲ್ಲಿ ನೂರಕ್ಕೆ ಎಪ್ಪತ್ತಕ್ಕೂ ಮೀರಿ ಜನತೆ, ಉದರನಿರ್ವಾಹಕ್ಕಾಗಿ ಒಕ್ಕಲುತನವನ್ನೇ ಆಶ್ರಯಿಸಬೇಕಾಗುತ್ತದೆ. ಆದರೆ ಇಂದಿನ ಈ ಒಕ್ಕಲುತನವು ಬಾಳಿಗಷ್ಟು ಕೀಳ ಸ್ಥಿತಿಯಲ್ಲಿರುವದಲ್ಲದೆ, ಎಷ್ಟೋಸಲ ಹಾನಿಕಾರಕವೂ

# ನನ್ನ ಮಾತು

ನೆದರ್ಲಂಡು ಗ್ರೇಟ ಬ್ರಿಟನ್ ಮತ್ತು ಐರ್ಲಂಡ ದೇಶಗಳಲ್ಲಿಯ ಸಹಕಾರಿ ಸಂಸ್ಥೆಗಳ ವಿಷಯವನ್ನು ಕುರಿತು ಅಭ್ಯಾಸಮಾಡುವದಕ್ಕೆ ಸಂಯುಕ್ತ ರಾಷ್ಟ್ರಗಳು (ಯುನಾಯಟೆಡ್ ನೇಶನ್ಸ)ಕೂಡಿ ನನಗೆ ಎಕಾನಾಮಿಕ್ ಡೆವ್ಹಲಪ್‌ಮೆಂಟ ಫೆಲೋಶಿಪ್ (ಆರ್ಥಿಕ ವಿಕಾಸ ವೇತನ)ವನ್ನು ಕೊಟ್ಟು ನನ್ನನ್ನು ಯುರೋಪ ಖಂಡಕ್ಕೆ ಕಳುಹಿದವು. ಅಭ್ಯಾಸದ ಅವಧಿಯು ಬರಿ ನಾಲ್ಕು ತಿಂಗಳದಿದ್ದಿತು. ಈ ನಾಲ್ಕು ತಿಂಗಳಲ್ಲಿ ನಾನು ನೆದರ್ಲಂಡಿನಲ್ಲಿ ಸುಮಾರು ಎರಡು ತಿಂಗಳು ಕಳೆದೆ. ನೆದರ್ಲಂಡಿನಲ್ಲಿ ತೀವ್ರಗತಿಯಿಂದ ಪ್ರಗತಿಪಡೆದ ಒಕ್ಕಲುತನದ ಸಹಕಾರವನ್ನು ಮುಖ್ಯವಾಗಿ ಅಭ್ಯಾಸಮಾಡಿ ರಭಸದಿಂದ ದೇಶದಲ್ಲೆಲ್ಲ ಸಂಚರಿಸಿ, ಬೇರೆ ಬೇರೆ ಪ್ರಕಾರದ ಅನೇಕ ಸಂಘಸಂಸ್ಥೆಗಳಿಗೆ ಭೆಟ್ಟಿಕೊಟ್ಟು, ಅವುಗಳ ಘಟನೆ, ರೂಪರೇಷೆ, ಕಾರ್ಯಪದ್ಧತಿ ಈ ಮೊದಲಾದವುಗಳನ್ನು ಕೂಲಂಕಷವಾಗಿ ಅಭ್ಯಸಿಸಿದೆ. ಹೊಲ, ತೋಟ ಕಾರಖಾನೆಗಳನ್ನೂ ಪ್ರವೇಶಿಸಿದೆ. ಒಕ್ಕಲಿಗರು, ಪ್ರಾಧ್ಯಾಪಕರು, ಪ್ರಮುಖ ಸಹಕಾರಿಗಳು, ಸಹಕಾರಿ ಸಂಘಗಳ ಅಮಲದಾರರು, ಮತ್ತು ಸರಕಾರದ ಉಚ್ಚ ಅಧಿಕಾರಿಗಳು ಈ ಮೊದಲಾದವರನ್ನೆಲ್ಲ ಸಂದರ್ಶಿಸಿ, ಅವರ ಸಂಗಡ ವಿಚಾರವಿನಿಮಯ, ಚರ್ಚೆ, ಊಹಾಪೋಹಗಳನ್ನು ಮಾಡಿದೆ. ಅನೇಕ ಸಂಘಸಂಸ್ಥೆಗಳಿಗೆ ಕೊಡಲ್ಪಟ್ಟ ಭೆಟ್ಟಿ, ಸಂಘಗಳ ಸಭಾಸದರೊಡನೆ ಮತ್ತು ಅಮಲದಾರರೊಡನೆ ಮಾಡಲ್ಪಟ್ಟ ಚರ್ಚೆ, ಅಧಿಕಾರಿಗಳೊಡನೆ ಮಾಡಲ್ಪಟ್ಟ ವಾದವಿವಾದ, ವಿಚಾರವಿನಿಮಯ, ಮತ್ತು ಲಬ್ಧವಾದ ವರದಿ, ಪತ್ರಿಕೆಗಳ ಅಭ್ಯಾಸ, ಇವೆಲ್ಲವುಗಳ ಪರಿಣಾಮವಾಗಿ, ಸಹಕಾರಾಂದೋಲನದ ವಿಷಯದಲ್ಲಿ ಒಂದು ಸ್ಪಷ್ಟ ಕಲ್ಪನೆಯನ್ನು ಮಾಡಿಕೊಂಡೆ. ಸಹಕಾರದ ಆಡಳಿತೆಯ ವಿಷಯದಲ್ಲಿ ಒಂದು ಸುವ್ಯವಸ್ಥಿತವಾದ ಅಂತರ್ದೃಷ್ಟಿಯನ್ನು ಪಡೆದೆ. ಬೇರೆ ಬೇರೆ ಪ್ರಕಾರದ ಸಹಕಾರಿ ಸಂಘಸಂಸ್ಥೆಗಳ ವಿಷಯದಲ್ಲಿ ಇಂಗ್ಲಿಷಿನಲ್ಲಿ ಸಾಹಿತ್ಯವು ದೊರೆಯುವ ಮೂಲಕ, ಅಂಕಿಸಂಖ್ಯೆಗಳ ವಿಷಯದಲ್ಲಿ ಸವಿಸ್ತಾರ ಮಾಹಿತಿಯನ್ನು ಪೂರೈಸುವದು ನನಗೆ ದುಸ್ಸಾಧ್ಯವಾಯಿತು! ಈ ಒಂದು ಕೊರತೆಯಿಂದ ನನ್ನ ಈ ಪುಸ್ತಕದಲ್ಲಿ ಕೆಲವೊಂದೆಡೆಯಲ್ಲಿ ಸರಿಯಾದ ಅಂಕಿಸಂಖ್ಯೆಗಳು ದೊರೆಯಲಿಕ್ಕಿಲ್ಲ. ಆದು

ದರಿಂದ ಇಲ್ಲಿ ನಾನು ಲೇಖಿಸಿದ ಚಿತ್ರವು ನಿರ್ದೋಷವೂ ಕಲಾಪೂರ್ಣವೂ ಆಗಿದೆಯೆಂದು ಹೇಳಲಾರೆ. ಆದರೂ ನನ್ನ ಮನಸ್ಸಿನ ಮೇಲೆ ಮೂಡಿದ ಚಿತ್ರವನ್ನು ಇಲ್ಲಿ ಶಕ್ಯವಿದ್ದಷ್ಟು ಸರಿಯಾಗಿ ಲೇಖಿಸಲು ಯತ್ನಿಸಿರುವೆ. ನನಗಿದ್ದ ಅವಧಿಯು ಅತ್ಯಲ್ಪವಾಗಿದ್ದರೂ, ಭಾಷೆಯ ತೊಂದರೆಯು ಮುಂದೆ ನಿಂತರೂ 'ಫೆಲೋಶಿಪ್' ಆಫೀಸರರು ಅಲ್ಲಿ ನನಗೆ ನೀಡಿದ ನೆರವನ್ನೂ, ನನ್ನ ಸಲುವಾಗಿ ಪಟ್ಟ ಪರಿಶ್ರಮವನ್ನೂ ಎಂದೂ ಮರೆಯಲಾರೆ. ಒಂದು ಸುವ್ಯವಸ್ಥಿತವಾದ ಕಾರ್ಯಕ್ರಮವನ್ನೇರ್ಪಡಿಸಿ, ಎಲ್ಲ ಬಗೆಯ ನೆರವು ನೀಡಿ ನನ್ನ ಸಹಕಾರದ ಅಭ್ಯಾಸಕ್ಕೆ ಅಗತ್ಯವಿರುವ ಎಲ್ಲ ವಸ್ತು ವಿಷಯ ಟಿಪ್ಪಣಿಗಳನ್ನು ಒದಗಿಸಿ, ನನ್ನ ಮೇಲೆ ಒಂದು ಉಪಕಾರದ ಹೊರೆಯನ್ನೇ ಹೊರಿಸಿರುವರು. ಆದುದರಿಂದ ಅವರಿಗೂ ಮತ್ತು ನನ್ನ ಅಭ್ಯಾಸದ ಪ್ರವಾಸವು ಯಶಸ್ವಿಯಾಗುವಂತೆ ಎಲ್ಲ ಬಗೆಯ ದಕ್ಷತೆ ವಹಿಸಿ, ಶ್ರಮ ಪಟ್ಟ ಅವರ ಅಸಿಸ್ಟಂಟರು ಅಂದರೆ ಸಹಾಯಕರಿಗೂ ನಾನು ತುಂಬಾ ಋಣಿಯಾಗಿರುವೆ. ಅಲ್ಲದೆ ನನ್ನನ್ನು ಆ ದೇಶದಲ್ಲಿ ಸ್ನೇಹ ಸೌಹಾರ್ದಗಳಿಂದ ಸ್ವಾಗತಿಸಿ, ಎಲ್ಲ ರೀತಿಯಿಂದ ಸಹಾಯಕರಾಗಿ ನಿಂತ ಅಲ್ಲಿಯ ಎಲ್ಲ ಸದ್ಗೃಹಸ್ಥರಿಗೂ, ಇನ್ನಿತರರಿಗೂ ನಾನು ಕೃತಜ್ಞನು.

ಇದು ನನ್ನ ನೆದರ್ಲೆಂಡ ಪ್ರವಾಸದ ಕತೆಯಾಯಿತು. ಇನ್ನು ಅಲ್ಲಿಯ ಸಹಕಾರಾಂದೋಲನದ ಚಿತ್ರವನ್ನು ಇಲ್ಲಿ ನಮ್ಮ ಭಾರತೀಯರಿಗೆ, ವಿಶೇಷವಾಗಿ ನಮ್ಮ ಕನ್ನಡಿಗರಿಗೆ ತೋರಿಸಬೇಕೆಂಬ ನಿಮ್ಮ ಉದ್ದೇಶದ ರಹಸ್ಯವೇನು ಎಂದು ಯಾರಾದರೂ ಕೇಳಬಹುದು. ಈ ಪ್ರಶ್ನೆಗೆ ನಾನು ಕೊಡುವ ಉತ್ತರವಿಷ್ಟೇ. 'ದಯವಿಟ್ಟು ಈ ಪುಸ್ತಕವನ್ನು ಓದಿ ಇದರಲ್ಲಿ ಮೂಡಿಸಿದ ಚಿತ್ರವನ್ನು ನಮ್ಮ ಭಾರತದ ಒಕ್ಕಲಿಗರ ಚಿತ್ರಕ್ಕೆ ಸರಿಹಚ್ಚಿ ನೋಡಿ! ಆಗ ಇದರ ಪ್ರಕಟಣೆಯ ಆವಶ್ಯಕತೆಯ ಉಪಯುಕ್ತತೆಯ ಕಲ್ಪನೆಯಾದೀತು.'

ನಮ್ಮ ಭಾರತದ ಅರ್ಥರಚನೆಯಲ್ಲಿ, ಅರ್ಥಶಾಸ್ತ್ರದಲ್ಲಿ ಒಕ್ಕಲುತನವು ಭಾರತದ ಬೆನ್ನೆಲುಬಾಗಿದೆ. ನಮ್ಮ ಭಾರತದ ಒಟ್ಟು ಜನಸಂಖ್ಯೆಯಲ್ಲಿ ನೂರಕ್ಕೆ ಎಪ್ಪತ್ತಕ್ಕೂ ಮೀರಿ ಜನತೆ, ಉದರನಿರ್ವಾಹಕ್ಕಾಗಿ ಒಕ್ಕಲುತನವನ್ನೇ ಆಶ್ರಯಿಸಬೇಕಾಗುತ್ತದೆ. ಆದರೆ ಇಂದಿನ ಈ ಒಕ್ಕಲುತನದ ಳೊಳಿಗವು ಕೀಳ ಸ್ಥಿತಿಯಲ್ಲಿರುವದಲ್ಲದೆ, ಎಷ್ಟೋ ಸಲ ಹಾನಿಕಾರಕವೂ

ಆಗಿದೆ. ಒಕ್ಕಲಿಗನು ಅನೇಕ ರೀತಿಯಲ್ಲಿ ಸುಲಿಯಲ್ಪಡುತ್ತಿರುವನು. ಅವನ ಉತ್ಪಾದನೆಯ ಮಾರ್ಗವು ಕಟ್ಟಾಗಿದೆ. ಉತ್ಪನ್ನದ ಉಗಮವು ಬತ್ತಿದೆ! ಅವನು ಧಾರಣಮಾಡಿದ ಭೂಮಿಗಳೋ ಸಣ್ಣ ಸಣ್ಣ ತುಂಡುಗಳು! ಅವನೋ ಅಶಿಕ್ಷಿತನು ಮೇಲಾಗಿ ಅಜ್ಞಾನಿ! ಅವನ ಧಾರಣಶಕ್ತಿಯೂ ಕುಂದುತ್ತಲಿದೆ! ಅವನ ಒಕ್ಕಲುತನದ ಪದ್ಧತಿಗಳೋ ಹಳೆಯವು! [illegible] ಅವನ ಆರ್ಥಿಕ ದುರವಸ್ಥೆಯ ಮೂಲಕ, ಇಂದಿನ ಯಾಂತ್ರಿಕ [illegible]ಯ ಕಡೆಗೂ ಅವನ ಲಕ್ಷ್ಯವು ವೇಧಿಸದು, ತನ್ನ ಹೊಲದ ಹುಟ್ಟು[illegible]ರ ಅಗ್ಗ ಬೆಲೆಗೆ ಮಾರಿ, ತನಗೆ ಬೇಕಾದ ಒಕ್ಕಲುತನದ ಸಾಮಾ[illegible]ನ್ನು ತೀರ ತುಟ್ಟಿಯ ಬೆಲೆಗೆ ಕೊಳ್ಳುವನು ಅಲ್ಲದೆ ನಿಸರ್ಗದ ಕೋಪತಾಪಗಳ ಮೂಲಕ ಒಕ್ಕಲುತನಕ್ಕೆ ಅನಿರೀಕ್ಷಿತವಾಗಿ ಒದಗುವ ಹಾನಿಗಳನ್ನು ತುಂಬಿಕೊಡುವ ವಿಮೆಯಂತಹ ಪರಿಹಾರಮಾರ್ಗವನ್ನು ಅವನು ಕನಸಿನಲ್ಲಿ ಸಹ ಕಂಡರಿಯನು! ಅಮೇರಿಕೆಯಂತಹ ದೇಶಗಳಲ್ಲಿ ಒಕ್ಕಲುತನದ ಹುಟ್ಟುವಳಿಯ ಬೆಲೆಗೆ ಸ್ಥಿರತೆಯನ್ನೊದಗಿಸಲಿಕ್ಕೆ ಕೊಡಲ್ಪಡುವ ಭರವಸೆಯ ಬೆಲೆ (ಗ್ಯಾರಂಟೀಪ್ರಾಯಿಸ)ಯ ಪದ್ಧತಿಯು ನಮ್ಮ ದೇಶದಲ್ಲಿಲ್ಲ. ಇಂಗ್ಲಂಡಿನಂತಹ ದೇಶಗಳಲ್ಲಿ ಮಾರ್ಕೆಟ್ ಬೋರ್ಡುಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಒಕ್ಕಲುತನದ ಹುಟ್ಟುವಳಿಯ ಬೆಲೆಯಲ್ಲಿ ಸ್ಥಿರತೆಯನ್ನು ಕಾಯುವ ವ್ಯವಸ್ಥೆಯನ್ನಿಟ್ಟುಕೊಂಡು ಒಕ್ಕಲುತನದ ಹುಟ್ಟುವಳಿಯ ಮಾರಾಟದ ಏರ್ಪಾಡು ಮಾಡಲಿಕ್ಕೆ, ಒದಗಿಸಲ್ಪಡುವ ಸಹಾಯ ಧನ ಪದ್ಧತಿಯೂ ನಮ್ಮ ಭಾರತದಲ್ಲಿಲ್ಲ. ನೇದರ್ಲಂಡಿನಲ್ಲಿ ಇಂತಹ ಸಮಸ್ಯೆಗಳಿಗೆ ಪರಿಹಾರಮಾರ್ಗವಾಗಿ ನಿಂತಿರುವ ಪ್ರಗತಿಪರ ಸಹಕಾರ ತತ್ವಗಳೂ ನಮ್ಮಲ್ಲಿ ಇನ್ನೂ ಅಷ್ಟು ಪ್ರಚಾರದಲ್ಲಿ ಬಂದಿಲ್ಲ ಹೀಗಾಗಿ ನಮ್ಮ ದೇಶದ ಒಕ್ಕಲಿಗನು ಇನ್ನೂ ತಡವರಿಸುತ್ತಲೇ ಇರುವನು. ಅವನು ತನ್ನ ಬಾಂಧವರೊಡನೆ ಕೂಡಿ, ಸಹಕಾರ ತತ್ವಗಳ ಮೇಲೆ ಸಂಘಟಿತನಾಗದಿದ್ದರೆ ಇಂತಹ ಸಮಸ್ಯೆಗಳನ್ನು ಬಿಡಿಸುವದು ಪರಮ ದುಸ್ತರವು! ಅವನು ಸಹಕಾರ ತತ್ವಗಳಿಗನುಸರಿಸಿ ನಡೆದುದಾದರೆ ಅವನ ಪತ್ತು ಬೆಳೆಯುವದು. ತನ್ನ ಹುಟ್ಟುವಳಿಯನ್ನು ತಾನೇ ಯೋಗ್ಯ ಬೆಲೆಗೆ ಮಾರಾಟ ಮಾಡಲು ಸಮರ್ಥನಾಗುವನು. ತನಗೆ ಅವಶ್ಯವಿರುವ ಒಕ್ಕಲುತನದ ಸಾಧನ ಸಾಮಗ್ರಿ ಸಲಕರಣೆಗಳನ್ನು ತಾನೇ ಪೂರೈಸಿಕೊಳ್ಳುವ ಸ್ಥಿತಿಗೇರುವನು. ತನ್ನ

ಹುಟ್ಟುವಳಿಯು ಮತ್ತು ಜೀವದ ವಿಮೆಯನ್ನು ಇಳಿಸಿ, ಭವಿಷ್ಯಕಾಲದಲ್ಲಿ ಒದಗಬಹುದಾದ ಹಾನಿಗಳಿಗೆ ಪರಿಹಾರ ಮಾರ್ಗವನ್ನು ಕಂಡುಕೊಳ್ಳಬಲ್ಲನು. ಇದರಿಂದ ಅವನ ಆರ್ಥಿಕ ವಿಪತ್ತು ಅಳಿಯುವದು. ಸಹಕಾರದ ಮೂಲಭೂತ ತತ್ವಗಳಾದ ಮಿತವ್ಯಯ ಸ್ವಾವಲಂಬನೆ ಮತ್ತು ಪರಸ್ಪರ ಸಹಾಯಗಳ ಅಭ್ಯಾಸವಾಗಿ ಅವನು ತನ್ನ ಕಾಲಮೇಲೆ ತಾನೇ ನಿಲ್ಲಬಲ್ಲನು. ಅಲ್ಲದೆ ಸಮಾಜದ ಮತ್ತು ನೈತಿಕ ಬಲವನ್ನೂ ಪಡೆಯುವನು.

ಸಹಕಾರದ ಪ್ರಜಾಪ್ರಭುತ್ವವು ನಮ್ಮ ಗುರಿಯೆಂದು ನಾವು ಭಾವಿಸತೊಡಗಿದಂದಿನಿಂದ ಈ ಸಹಕಾರಕ್ಕೆ ಒಂದು ವಿಶಿಷ್ಟ ಮಹತ್ವವು ಬಂದಿದೆ. ನಮ್ಮ ರಾಜ್ಯಘಟನೆಯಲ್ಲಿ, ರಾಜಕೀಯ, ಸಾಮಾಜಿಕ, ಆರ್ಥಿಕ ಸಮಾನತೆ ಮತ್ತು ನ್ಯಾಯವು ಸಿಗಬೇಕೆಂದು ಘೋಷಿಸಲ್ಪಟ್ಟಿದೆ. ಇದರ ಸಾಧನೆಗೆ ಸಹಕಾರವೂ ಒಂದು ಮಾರ್ಗ ! ಕೆಲವೊಂದು ಆರ್ಥಿಕ ಚಟುವಟಿಕೆಗಳಲ್ಲಿ, ವಿಶೇಷತಃ ಒಕ್ಕಲುತನಕ್ಕೆ ಮತ್ತು ಗ್ರಾಮವಿಕಾಸಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಸಹಕಾರದ ಪದ್ಧತಿಯನ್ನು ಅಳವಡಿಸಿಕೊಳ್ಳಲು ಯೋಜನಾ ಸಮಿತಿಯು ನಿರ್ಣಯಿಸಿದೆ. ನಮ್ಮ ಮುಂಬಯಿ ರಾಜ್ಯದಲ್ಲಿ ಯಂತೂ ಆರ್ಥಿಕ ಸ್ವಾತಂತ್ರ್ಯ ಸಮಾನತೆಗಳಿಗಾಗಿ, ನಮ್ಮ ದೇಶಕ್ಕೆ ಸ್ವಾತಂತ್ರ್ಯವು ದೊರೆತಂದಿನಿಂದ, ಸರಕಾರವು ಸಹಕಾರವನ್ನು ಒಂದು ಸಾಧನೆಯನ್ನಾಗಿ ಮಾಡಿಕೊಂಡಿದೆ. !

೧೯೫೨ ನೆಯ ಜೂನ ೩೦ ಕ್ಕೆ ನಮ್ಮ ಮುಂಬಯಿ ರಾಜ್ಯದಲ್ಲಿ ಒಟ್ಟಿಗೆ ೧೬೫೭ ಸಂಘಗಳಿವೆ. ಇವುಗಳ ಸಭಾಸದರ ಒಟ್ಟು ಸಂಖ್ಯೆ ೨೫೩೫೫೩ ಇದೆ. ದುಡಿಯುವ ಬಂಡವಾಳವು ೯೩೬೯೫೫೯೫೫ ರೂಪಾಯಿಯಿದೆ. ಈ ಮೊದಲೇ ಹೇಳಿದಂತೆ ಈ ಸಂಘಗಳಲ್ಲಿ ನೂರಕ್ಕೆ ಅರವತ್ತೈದಕ್ಕೆ ಮೇಲ್ಪಟ್ಟು ಇನ್ನೂ ಒಕ್ಕಲುತನದ ಸಂಘಗಳಿವೆ. ಇದನ್ನು ನೋಡಿದರೆ, ನಾವು ಕೈಕೊಳ್ಳತಕ್ಕ ಅತಿ ಮಹತ್ವದ ಚಟುವಟಿಕೆಯೆಂದರೆ ಒಕ್ಕಲುತನದ ಸುಧಾರಣೆಯೇ ಸರಿ! ಮತ್ತು ಸರಕಾರದ ಲಕ್ಷವನ್ನು ವೇಧಿಸುವ ಪ್ರಧಾನವಿಷಯವೆಂದರೆ ಇದೇ ಒಂದು!

ಒಕ್ಕಲುತನದ ಮತ್ತು ಔದ್ಯೋಗಿಕ ಎಲ್ಲ ಬಗೆಯ ಸಮಸ್ಯೆಗಳಿಗೆ ಪರಿಹಾರವೆಂದರೆ ಸಹಕಾರವೇ ಸರಿ! ಸಾಲ ಪೂರೈಕೆ, ಉತ್ತಮ ಬೇಸಾಯ,

ದನಗಳ ತಳಿಗಳ ಸುಧಾರಣೆ, ಹೈನದ ಸುಧಾರಣೆ, ಹೊಲದ ಹುಟ್ಟುವಳಿಯನ್ನು ಯೋಗ್ಯವರದಿಂದ ಮಾರುವ ಏರ್ಪಾಡು, ಮನೆತನಕ್ಕೂ ಒಕ್ಕಲುತನಕ್ಕೂ ಅಗತ್ಯವಿರುವ ಸಾಧನ ಸಾಮುಗ್ರಿಗಳನ್ನು ಪೂರೈಸುವ, ತರಿಸಿಕೊಡುವ ವ್ಯವಸ್ಥೆ ಗೃಹೋದ್ಯೋಗ—ಗ್ರಾಮೋದ್ಯೋಗಗಳ ಸುಧಾರಣೆ ಈ ಮೊದಲಾದವೆಲ್ಲವೂ ಒಕ್ಕಲುತನದ ಸುಧಾರಣೆಯಲ್ಲಿ ಸಮಾವೇಶವಾಗುವವು. ಸಹಕಾರದಿಂದ ಒಕ್ಕಲುತನದ ಸುಧಾರಣೆಯೆಂದರೆ ಇವೆಲ್ಲವುಗಳ ಸುಧಾರಣೆ!

ನಾನು ನೆದರ್ಲಂಡಿನಲ್ಲಿ ಪ್ರತ್ಯಕ್ಷವಾಗಿ ಕಂಡ, ಮನಗಂಡ ಸಹಕಾರವೆಂದರೆ ಒಕ್ಕಲುತನದ ಪತ್ತಿನ ಮತ್ತು ಬಿನ್ ಪತ್ತಿನ ವ್ಯವಹಾರಕ್ಕೆ ಸಂಬಂಧಪಟ್ಟ ಒಕ್ಕಲುತನದ ಸಹಕಾರವು! ಈ ಸಹಕಾರವು ಅಲ್ಲಿ ಭದ್ರವಾದ ತಳಹದಿಯ ಮೇಲೆ ಕಟ್ಟಲ್ಪಟ್ಟದೆ! ಕಟ್ಟಲ್ಪಡುತಲಿವೆ. ಇದು ಒಕ್ಕಲಿಗರಿಗೆ ಸುಖಶಾಂತಿ ಸಮೃದ್ಧಿಗಳನ್ನು ಒದಗಿಸಿಕೊಟ್ಟದೆ.

ಈ ಎಲ್ಲ ಅಂಶಗಳನ್ನು ವಿಚಾರಿಸಿದರೆ, ನನ್ನ ಈ ಕನ್ನಡ ಪ್ರಕಟಣೆಯು ನಮ್ಮ ಕನ್ನಡ ರೈತ ಬಾಂಧವರಿಗೆ ಉಪಯುಕ್ತವೂ ಮಾರ್ಗದರ್ಶಕವೂ ಆದೀತೆಂದು ನನ್ನ ಎಣಿಕೆ, ಭಾವನೆ! ಈ ಭಾವನೆಗೆ ಕನ್ನಡದಲ್ಲಿ ರೂಪ ಕೊಡಲು ಯತ್ನಿಸಿದ ಬೆಳಗಾಂವ ಜಿಲ್ಲೆಯ ಕೋ-ಆಪರೇಟಿವ್ಹ ಟ್ರೇನಿಂಗ ಇನ್ಸಪ್ಪೇಕ್ಟರರಾದ ಶ್ರೀ. ಈಶ್ವರ ಸಣಕಲ್ಲರವರು ಸಹಕಾರ ತತ್ವಗಳ, ಆದರ್ಶಗಳ ಪ್ರಚಾರ ಕಾರ್ಯದ ಒಂದು ಮಹತ್ವದ ಹೊಣೆಯನ್ನು ನಿರ್ವಹಿಸಿದರೆಂದು ಹೇಳಲು ನನಗೆ ಅಭಿಮಾನವೂ ಆನಂದವೂ ಎನಿಸುತ್ತದೆ.

ಈ ಮೊದಲು ಮುಂಬಯಿ ರಾಜ್ಯದ ಒಕ್ಕಲುತನದ ಮತ್ತು ಅರಣ್ಯ ಖಾತೆಗಳ ಲೋಕಪ್ರಿಯ ಮಂತ್ರಿಗಳಾಗಿ ಕೆಲಸಮಾಡಿ ಅನುಭವ ಪಡೆದ, ಮತ್ತು ಈಗ ಸಹಕಾರದ ಮತ್ತು ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಮಂತ್ರಿಗಳಾಗಿ ಲೋಕ ಸೇವೆಯನ್ನು ಸಲ್ಲಿಸುತ್ತಿರುವ ಮಾನ್ಯಮಂತ್ರಿ ಶ್ರೀ. ಎಂ. ಪಿ. ಪಾಟೀಲರವರು ನನ್ನ ಈ ಕಿರಿ ಹೊತ್ತಿಗೆಗೆ ತಮ್ಮ ಅನುಭವಪೂರ್ಣ ಅಭಿಪ್ರಾಯವನ್ನು ದಯಪಾಲಿಸಿದುದಕ್ಕಾಗಿ ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯ ಅಭಿವಂದನೆಗಳು.

ಅದರಂತೆಯೇ ನಮ್ಮ ಮುಂಬಯಿ ರಾಜ್ಯದ ಸಹಕಾರಿ ಸಂಘಗಳ ಮಾನ್ಯ ರಜಿಸ್ಟ್ರಾರ ಸಾಹೇಬರಾದ ಶ್ರೀ. ಪಿ. ಜೇ. ಚಿನ್ನಮುಳಗುಂದ ಆಯ್. ಸೀ. ಎಸ್. ಅವರು ಇವಕ್ಕೆ ತಮ್ಮ ಅಮೂಲ್ಯವಾದ ಅಭಿಪ್ರಾಯವನ್ನು ಕೊಟ್ಟು ನನ್ನನ್ನು ಪ್ರೋತ್ಸಾಹಿಸಿದುದಕ್ಕಾಗಿ ಅವರಿಗೂ ನಾನು ತುಂಬಾ ಋಣಿಯು.

ಇದನ್ನು ಸಕಾಲಕ್ಕೆ ಅಚ್ಚುಕಟ್ಟಾಗಿ ಅಚ್ಚು ಹಾಕಿ, ಪ್ರಕಟಿಸುವ ಹೊಣೆ ಹೊತ್ತು ನಿಂತ ಬೆಳಗಾವಿಯ ವೀರಭಾರತ ಮುದ್ರಣಾಲಯದ ಒಡೆಯರಾದ ಶ್ರೀ. ಎ. ಪಿ. ಚೌಗುಲೆಯವರಿಗೂ ನಾನು ಕೃತಜ್ಞನು.

ಇದೇ ವೇಳೆಗೆ ಇದರ ಪ್ರಕಟಣೆಯ ಯಶಸ್ಸಿಗಾಗಿ ಯತ್ನಿಸಿದ ಸಹಕರಿಸಿದ ಇನ್ನಿತರರಿಗೂ ನಾನು ಕೃತಜ್ಞನೆಂದು ಬೇರೆ ಹೇಳಬೇಕೇ ?

ಬೆಳಗಾಂವ — ಬಿ. ಎ. ಪಾಟೀಲ, ಎಂ. ಎ; ಜೀ. ಡಿ. ಸಿ. ಎ.

೧೪–೨–೫೩ — ಡೆಪ್ಯುಟಿ ರಜಿಸ್ಟ್ರಾರ ಸಹಕಾರಿ ಸಂಘಗಳು, ಬೆಳಗಾವಿ.

# ಅಭಿಪ್ರಾಯವು

ನೆದರ್ಲಂಡಿನಲ್ಲಿಯ ಸಹಕಾರಾಂದೋಲನದ ಬಗೆಗೆ ಶ್ರೀ. ಬಿ.ಎ. ಪಾಟೀಲರವರು ಬರೆದ ಪುಸ್ತಕವನ್ನು ನಾನು ಅತ್ಯಾಸಕ್ತಿಯಿಂದಲೂ ಅತೀವ ಆನಂದದಿಂದಲೂ ಓದಿದೆನು ಶ್ರೀ ಪಾಟೀಲರವರು ನೆದರ್ಲಂಡಿಗೆ ಕೊಟ್ಟ ಭೆಟ್ಟಿಯ ಉಪಯೋಗವನ್ನು ಚೆನ್ನಾಗಿ ಮಾಡಿಕೊಂಡಿರುವರಲ್ಲದೆ ದೇಶದ ಆರ್ಥಿಕ ಜೀವನದ ಬಹುಭಾಗವನ್ನು ತನ್ನ ತಳ್ಕೆಯಲ್ಲಿ ಆಲಿಂಗಿಸಿದ ನೆದರ್ಲಂಡಿನಲ್ಲಿಯ ಸಹಕಾರಾಂದೋಲನದ ಅನೇಕ ವಿಷಯಗಳ ಅವಲೋಕನೆಯನ್ನು ಮನೋವೇಧಕವಾಗಿ ಮಾಡಿರುವರು.

ನಮ್ಮ ದೇಶದಲ್ಲಿ ಸಹಕಾರವು ಈ ನೊದಲೇ ಆಳವಾಗಿ ಬೇರು ಬಿಟ್ಟಿದೆ. ಸಹಕಾರವು ಜೀವನದ ನವ ತತ್ವಜ್ಞಾನವಾಗಿ ಅರಳುವಂತಾಗಬೇಕಾದರೆ, ಸಹಕಾರದ ರೀತಿನೀತಿಗಳ ವೃದ್ಧಿಸಿದ್ಧಿಗಳ ಜ್ಞಾನದ ಪ್ರೇರಣೆಯೂ ಪ್ರಚಾರವೂ ಸ್ವ-ಪರದೇಶಗಳಲ್ಲಿ ಇದೀಗ ಅತೀವ ಮಹತ್ವದ್ದಾಗಿದೆ! ಶ್ರೀ ಪಾಟೀಲರವರ ಈ ಪುಸ್ತಕವೆಂದರೆ ಸಹಕಾರ ಸಾಹಿತ್ಯಕ್ಕೆ ಒಂದು ಅಮೂಲ್ಯವಾದ ಕಾಣಿಕೆಯು! ಅಲ್ಲದೆ ಸಹಕಾರದ ಮಹೋದ್ದೇಶವನ್ನು ಮುಂದುವರಿಸುವಲ್ಲಿ ಒಂದು ಉಪಯುಕ್ತ ಸಾಧನೆಯೆಂದು ಬೇರೆ ಹೇಳಬೇಕೆ?

ಮುಂಬಯಿ

೧೭-೧೨-೫೭

ಎಂ. ಪಿ. ಪಾಟೀಲ
ಸಹಕಾರದ ಮತ್ತು ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ
ಮಂತ್ರಿಗಳು, ಮುಂಬಯಿ.

"ಕನ್ನಡದಲ್ಲಿಯ ನೆದರ್ಲಂಡಿನಲ್ಲಿಯ ಸಹಕಾರವೆಂಬ ತಮ್ಮ ಪುಸ್ತಕವನ್ನು ನಾನು ಬಹಳೇ ಆಸಕ್ತಿಯಿಂದ ಓದಿದೆ. ನೆದರ್ಲಂಡಿನಲ್ಲಿಯ ಸಹಕಾರಾಂದೋಲನದ ಮತ್ತು ಹಳ್ಳಿಗಳಲ್ಲಿಯ ಸಾಮಾನ್ಯ ಮನುಷ್ಯನ ಮಟ್ಟವನ್ನು ಮೇಲಕ್ಕೆತ್ತುವಲ್ಲಿ ಈ ಸಹಕಾರಾಂದೋಲನವು ಸಾಧಿಸಿದ ಪರಿಣಾಮದ ಸ್ಪಷ್ಟ ಚಿತ್ರವನ್ನಿಲ್ಲಿ ಕಾಣುತ್ತೇವೆ ಸಹಕಾರ ಕ್ಷೇತ್ರದಲ್ಲಿ ದುಡಿಯುವ ಪ್ರತಿಯೊಬ್ಬ ಕನ್ನಡಿಗನಿಗೂ ಅದರಂತೆಯೇ ಅದರ ಹೊರಗಿರುವ ಎಲ್ಲ ಕನ್ನಡ ಜನತೆಗೂ ಈ ಪುಸ್ತಕವು ಬೋಧಪ್ರದವೂ ಮನೋರಂಜಕವೂ ಆಗುವದೆಂಬುದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ."

ಪುಣೆ

೯-೧೨-೧೯೫೭

ಪಿ. ಜೇ. ಚಿನ್ನಮುಳಗುಂದ.
ಆಯ್. ಸಿ. ಎಸ್.
ರಜಿಸ್ಟ್ರಾರ, ಸಹಕಾರಿ ಸಂಘಗಳು,
ಮುಂಬಯಿ ರಾಜ್ಯ.

# OPINIONS

## *MINISTER, GOVERNMENT OF BOMBAY.*

I read with pleasure and sustained interest in Shri B. A. Patil's book on Co-operative Movement in Netherlands. Shri Patil has made good use of his visit to Netherlands and, has presented to the Co-operative World in this country a very instructive and interesting survey of the various facts of the Co-operative Movement in Netherlands, a country wherein Co-opeatrion has enveloped in its fold major portion of the economic life of the country.

Co-operation has already taken firm roots in this country. Dissemination of knowledge about co-operative methods and achievements in this country and abroad are now of permanent importance in seeing co-operation blossom out into a new philosophy of life. Shri Patil's book is a valuable contribution to co-operative literature and serves a useful purpose in furthering the cause of co-operation.

**Bombay,** **M. P. PATIL.**
Minister for Local Self-Government
17-12-52. and Co-operation.

Co-operative Department,
Poona, December 9, 1952.

" I read your Book with great interest. It gives a clear picture of the Co-operative Movement in Netherlands and the results it has achieved in raising the level of the common man on the country side. I have no doubt that the book would be found very interesting and informative by every Kannada reader working in the Co-operative Movement and outside.

Yours sincerely,
**P. J. Chinmulgund**
Registrar. Co-op. Societies.
**Bombay State.**

# ೧ ಇಂದಿನ ನೆದರ್ಲಂಡು



ಸಮುದ್ರದ ಉಪಟಳದಿಂದ, ರಾಶಿ ರಾಶಿಯಾಗಿ ಕೂಡಬಿದ್ದಿರುವ ಉಸುಬಿನ ಪರ್ವತ ಶ್ರೇಣಿಗಳಿಂದ ಕೆಲಮಟ್ಟಿಗೆ ಸಂರಕ್ಷಿತವಾದ ರಾಯಿನ್ ನದಿಯ ಜವುಗು ಮುಮ್ಮೂಲೆಯ ( ಡೆಲ್ಟಾ ) ಪ್ರದೇಶಗಳಲ್ಲಿ ಕೂಡ ಬೀಳುವ ಮಣ್ಣಿನಿಂದ ಇಂದಿನ ನೆದರ್ಲಂಡು ಅಸ್ತಿತ್ವದಲ್ಲಿ ಬಂದಿದೆ. ಕೂಡ ಬೀಳುವ ಈ ಮಣ್ಣಿನಲ್ಲಿ, ನದಿಗಳಿಂದ ಪೂರೈಸಲ್ಪಡುವ ರೇವೆಯು ಕೆಲವಂಶವಿದ್ದರೆ, ಜವಳು ಭೂಮಿಗಳಲ್ಲಿ ಕೊಳೆತು ಹೋಗುವ ಕಸ ಕಡ್ಡಿ, ಎಲೆ, ತೊಪ್ಪಲುಗಳ ಕೆಲವಂಶವೂ ಇದೆ. ಇಂದಿಗೆ ಇವು ಕವಿಗಳ ಸುಂದರ ನಂದನವಾಗಿದೆ. ಈ ನೆದರ್ಲಂಡು ಸಮುದ್ರದ ಪಾತಳಿಗಿಂತ ತೀರ ಕೆಳಗಿದ್ದುದರಿಂದ, ರಭಸದಿಂದ ಅಪ್ಪಳಿಸುವ ಉತ್ತರ ಸಮುದ್ರದ ಪ್ರಚಂಡ ತೆರೆಗಳಿಂದ, ಮೇಲಿಂದ ಮೇಲೆ ಮುಳುಗಿ ಹೋಗುವ ಸಂಭವ ವಿದ್ದಿತು. ಹತ್ತನೇ ಶತಮಾನದಿಂದ ನಿಸರ್ಗದ ದಾಳಿಯನ್ನು ತಡೆದು, ನೆದರ್ಲಂಡು ಮಾನವ-ವಸತಿಗೆ ಯೋಗ್ಯವಾದ ಸ್ಥಳವಾಗುವ ಹಾಗೆ ಪ್ರಯತ್ನಿಸುವ ದೃಷ್ಟಿಯಿಂದ ಆಣೆಕಟ್ಟುಗಳನ್ನು ಕಟ್ಟಿ, ಭದ್ರವಾದ ಇತರ ಉಪಾಯುಗಳನ್ನು ಕೈಕೊಂಡು ಅದರ ಸುರಕ್ಷಿತತೆಯ ಸಲುವಾಗಿ ಎಣಿಕೆ ಹಾಕುತ್ತಲೇ ಇರುವರು. ಆಧುನಿಕ ಸುಧಾರಿಸಿದ ಯಾಂತ್ರಿಕ ಸಂಶೋಧನೆ, ವಿಕಾಸ, ಪ್ರಗತಿಗಳ ಜೊತೆಗೆ ಡಚ್ಚಜನರ ಅವ್ಯಾಹತವಾದ ಪರಿಶ್ರಮವೂ; ಅಖಂಡವಾದ ಪ್ರಯತ್ನವೂ ಮೇಳಗೂಡಿ ಸಮುದ್ರದ ದಾಳಿಯನ್ನೂ ಉಪಟಳವನ್ನೂ ತಡೆಗಟ್ಟಲು ಸಮರ್ಥವಾಗಿವೆ. ಸದ್ಯಕ್ಕೆ ಆಧುನಿಕ ಪದ್ಧತಿಯಿಂದ ಕಟ್ಟಲ್ಪಟ್ಟ ಕಾಲುವೆಗಳ ಮುಖಾಂತರ ನೀರು ಹರಿದು ಹೋಗುವ ಉತ್ತಮ ಏರ್ಪಾಡನ್ನು ಮಾಡಲಾಗಿದೆ. ಸಮುದ್ರದ
ಳಿಂದ ಕಳೆದು ಹೋದ ಭೂಮಿಯನ್ನು ತಿರುಗಿ ಸಂಪಾದಿಸುವ
ಂದ, ಮತ್ತು ಹೆಚ್ಚು ಹೆಚ್ಚು ಭೂಮಿಯನ್ನು ಸಾಗುವಳಿ ಮಾಡಿ
ಆಹಾರ ಸೌಕರ್ಯವನ್ನು ಒದಗಿಸುವ ದೃಷ್ಟಿಯಿಂದ, ಶತ್ರುವಾದ

ಸಮುದ್ರದ ನೀರೊಡನೆ ವಂಶಪರಂಪರೆಯಾಗಿ ಸಾಗಿಸಿದ ಹೋರಾಟ ವನ್ನು ಇನ್ನೂ ಮುಂದುವರಿಸಿ ಭೂಮಿಯ ಸುರಕ್ಷಿತತೆಯನ್ನು ಕಾಯ್ದು ಕೊಳ್ಳುವ ಪ್ರಯತ್ನಗಳು ಇನ್ನೂ ಸಾಗುತ್ತಲೇ ಇವೆ. ಸಾಗುವಳಿಗಾಗಿ ಕಳೆದುಹೋದ ಅಥವಾ ಕರಗಿ ಹೋದ ಭೂಮಿಯನ್ನು ಮರಳಿ ಸಂಪಾ ದಿಸುವದೆಂದರೆ ಅಥವಾ ನಿರ್ಮಿಸುವದೆಂದರೆ ಝುಯಿಡರ ಝಿಪಾವು ಲ್ಡರ ಭೂಮಿಯನ್ನು ತಿರುಗಿ ನಿರ್ಮಿಸುವ ಯೋಜನೆಗೆ ಉತ್ತೇಜನ ಕೊಟ್ಟಂತೆ. ಈ ಯೋಜನೆಗಳಲ್ಲಿ ಈಗಾಗಲೇ ಎರಡು ಯೋಜನೆಗಳು ಮುಗಿದು ಹೋಗಿವೆ. ಈ ಮೇರೆಗೆ ಆಣೆಕಟ್ಟುಗಳನ್ನು ಕಟ್ಟಿ, ಮಳಲ ರಾಶಿಯ ಪರ್ವತಗಳನ್ನು ರಚಿಸಿ, ನೀರು ಒಳಸೇರದ ಹಾಗೆ ಭೂಮಿಯ ಸಂದು ಸಂದುಗಳನ್ನು ಕೀಲಿಸಿ, ಮತ್ತು ಭೂಮಿಯಲ್ಲಿಯ ನೀರು ಹರಿದು ಹೋಗಿ ದೊಡ್ಡ ದೊಡ್ಡ ಸರೋವರಗಳಾಗುವಂತೆ ವ್ಯವಸ್ಥೆಮಾಡಿ ಭೂಮಿಯ ಬಹು ದೊಡ್ಡ ಕ್ಷೇತ್ರವನ್ನು ಸಾಗುವಳಿ ಮಾಡಿರುವರು. ಭೂಮಿಯನ್ನು ಮರಳಿ ನಿರ್ಮಿಸುವ ಅಥವಾ ಸಂಪಾದಿಸುವ ಕ್ರಮವು ಇನ್ನೂ ಪ್ರಚಂಡ ಶಕ್ತಿಯಿಂದ ಕಾರ್ಯೋನ್ಮುಖವಾಗಿದೆ. ಸದ್ಯದ ಈ ಯೋಜನೆಗಳು ಪೂರ್ತಿಯಾದರೆ, ಈಗಿರುವ ಭೂಮಿಗೆ ಮತ್ತೆ ೩,೮೦,೦೦೦ ಎಕರೆಗಳ ಜಮೀನು ಜೇಗನೇ ಜಮೆಯಾಗುವದು. ಈ ದೇಶದ ನೀರು ಹರಿದು ಹೋಗುವ ಪದ್ಧತಿಯು ಅಭ್ಯಸನೀಯವೂ ಪ್ರಶಂಸನೀಯವೂ ಆಗಿದೆ.

## ಮೇರೆ ಮರ್ಯಾದೆಗಳು

ಸ್ಕ್ಯಾಂಡಿನೇವ್ಹಿಯಾ ಲ್ಯಾಟಿನ್ ಮತ್ತು ಜರ್ಮನಿ ಮತ್ತು ಗ್ರೇಟ ಬ್ರಿಟನ್ ದೇಶಗಳ ನಡುವೆ ಈ ನೆದರ್ಲಂಡು ಇರುವದು. ಈ ದೇಶದ ತುಂಬೆಲ್ಲ ನದಿಗಳು ಕಾಲುವೆಗಳು ಹರಿದಿರುವವಲ್ಲದೆ, ಯುರೋಪಖಂಡದ ಮಧ್ಯಭಾಗದ ವರೆಗೂ ಹಾಯ್ದು ಹೋಗಿರುವ ಉಗಿಬಂಡಿಯ ಮತ್ತು ಜಲ ಪರ್ಯಟಣದ ಸಾರಿಗೆಯ ರಸ್ತೆಗಳೊಡನೆ ಸಂಬಂಧಿಸಿರುವವು. ಈ ದೇಶವು ೧೨,೬೦೦ ಚೌರಸ ಮೈಲುಗಳಿದ್ದು ಇದರಲ್ಲಿ ನೂರಕ್ಕೆ ಹದಿಮೂರರಷ್ಟು ಭಾಗವು ಹಳ್ಳಿ, ಪಟ್ಟಣ, ರಸ್ತೆ, ಕಾಲುವೆ, ಕಾರಖಾನೆ, ವಿಮಾನನಿಲ್ದಾಣ, ಭವ್ಯವಾದ ಪ್ರತ್ಯೇಕವಾದ

ಕಟ್ಟಡ ಈ ಮೊದಲಾದವುಗಳಿಂದ ಆಕ್ರಮಿಸಲ್ಪಟ್ಟಿದೆ. ಎಂಟರಷ್ಟು ಭಾಗವು ಪಡ ಅಥವಾ ಬೀಳುಬಿದ್ದ ಜಮೀನುಗಳಿಂದ ಆವೃತವಾಗಿವೆ. ಏಳರಷ್ಟು ಭಾಗವು ಅರಣ್ಯಗಳಿಂದ ತುಂಬಿವೆ. ಉಳಿದ ಎಪ್ಪತ್ತೆರಡರಷ್ಟು ಭಾಗವು ಸಾಗುವಳಿ ಮಾಡಲ್ಪಟ್ಟಿದೆ. ಸಾಗುವಳಿ ಮಾಡಲ್ಪಟ್ಟ ಭೂಮಿಯಲ್ಲಿ ಮೂರರಷ್ಟು ಬಾಗಾಯತ ಬೆಳೆಗಳ ಸಲುವಾಗಿ, ೬೯ ರಷ್ಟು ಭಾಗವು ಬೇರೆ ಬೇರೆ ಬೆಳೆಗಳ ಸಲುವಾಗಿ ಉಪಯೋಗಿಸಲ್ಪಟ್ಟಿದೆ. ಬಾಗಾಯತ ಬೆಳೆಗಳ ಸಲುವಾಗಿ ಉಪಯೋಗಿಸಲ್ಪಟ್ಟ ಭೂಮಿಯ ಕ್ಷೇತ್ರವು ಒಟ್ಟು ೧,೧೬೪೭೭ ಎಕರೆಗಳುಳ್ಳದ್ದಿದೆ.

## ಜನಸಂಖ್ಯೆ

ಈ ದೇಶವ ಜನಸಂಖ್ಯೆಯು ಒಂಬು ಕೋಟಿಗಿಂತ ತುಸು ಹೆಚ್ಚಿಗಿವೆ. ಇಪ್ಪತ್ತೈದು ಲಕ್ಷ ಕುಟುಂಬಗಳಿವೆ. ಜನವಟ್ಟಣೆಯು ಪ್ರತಿ ಚೌರಸ ಮೈಲಿಗೆ ೮೧೫ ರಂತೆ ಬೀಳುವದು. ಗ್ರೇಟ ಬ್ರಿಟನ್, ಫ್ರಾನ್ಸ ಮತ್ತು ಯುನಾಯಿಟೆಡ್ ಸ್ಟೇಟ್ಸ ಅಫ್ ಅಮೇರಿಕಾ ದೇಶಗಳ ಜನಪಟ್ಟಣೆಯ ಪ್ರಮಾಣವು ಪ್ರತಿ ಚೌರಸ ಮೈಲಿಗೆ ಅನುಕ್ರಮವಾಗಿ ೫೩೩, ೧೯೪, ಮತ್ತು ೪೯ ರಂತೆ ಬೀಳುವದು. ಅತಿ ದೊಡ್ಡ ಪಟ್ಟಣಗಳಾದ ಆಮಸ್ಟರ್ಡಾಮ್, ರಾಟರಡ್ಯಾಮ ಮತ್ತು ಹೇಗಗಳಲ್ಲಿಯ ೮,೩೫೦೦೦, ೬,೭೫೦೦೦ ಮತ್ತು ೫೬೦೦೦೦ ಜನಸಂಖ್ಯೆಯನ್ನು ಲೆಕ್ಕಕ್ಕೆ ಹಿಡಿದು ಉತ್ತರ ಮತ್ತು ದಕ್ಷಿಣ ಹಾಲಂಡ ಪ್ರಾಂತಗಳ ಜನವಟ್ಟಣೆಯ ಬಗೆಗೆ ಹೇಳಬೇಕಾದರೆ, ಇಲ್ಲಿಯಷ್ಟು ಜನದಟ್ಟಣೆಯು ಈ ದೇಶದ ಇನ್ನಾವ ಭಾಗವಲ್ಲಿಯೂ ಇಲ್ಲ. ನೂರಕ್ಕೆ ನಾಲ್ವತ್ತಕ್ಕಿಂತ ಮಿಕ್ಕಿ ಈ ಪ್ರಾಂತಗಳ ಜನದಟ್ಟಣೆಯಿದೆ. ಇಡೀ ಜಗತ್ತಿನಲ್ಲಿಯೇ ಈ ನೆದರ್ಲಂಡ ದೇಶವು ಜನವಟ್ಟಣೆಯಿಂದ ತುಂಬಿ ತುಳುಕುತಿದೆ. ತೀರ ಸಣ್ಣ ಕ್ಷೇತ್ರದ ಈ ದೇಶವು ಸುಮಾರು ಒಂಬು ಕೋಟಿ ಜನರಿಗೆ ಆಹಾರವನ್ನೊದಗಿಸಬೇಕಾಗಿದೆ. ಇಲ್ಲಿಯ ಜನಸಂಖ್ಯೆಯ ಪ್ರಮಾಣವನ್ನೂ ಭೂಮಿಯ ಕ್ಷೇತ್ರವನ್ನೂ ವಿಚಾರಿಸಿದರೆ, ಪ್ರತಿಯೊಬ್ಬನಿಗೆ ೦. ೫೯ ಎಕರೆ ಜಮೀನು ಬೀಳುವದು. ಇಲ್ಲಿಯ ಹುಟ್ಟಿನ ಪ್ರಮಾಣವು ಪಶ್ಚಿಮ ಯುರೋಪ ಖಂಡದಲ್ಲಿಯ ಪ್ರತಿಸಾವಿರಕ್ಕೆ ೨೮.೬ ಇದ್ದು, ಮರಣದ ಪ್ರಮಾಣವು ಪ್ರತಿ ಸಾವಿ

ರಕ್ಕೆ ೯.೪ ಇರುವದು. ಶಿಶು ಮರಣ ಪ್ರಮಾಣವು ತೀರ ಕಡಿಮೆಯ ಪ್ರಮಾಣದಲ್ಲಿರುವದು.

## ಹವೆ ಮತ್ತು ಭೂಗುಣ

ಮಳೆಯ ಪ್ರಮಾಣವು ಅನುಕೂಲವಾಗಿದ್ದು ದೇಶದ ತುಂಬೆಲ್ಲ ಸರಿ ಸಮಾನವಾಗಿ ಬೀಳುವದು. ಬಿದ್ದ ಮಳೆಯ ಪ್ರಮಾಣವನ್ನು ದೇಶದ ತುಂಬೆಲ್ಲ ಸರಿಯಾಗಿ ಹಂಚಿದರೆ, ಮಳೆಯ ಸರಾಸರಿಯು ಪ್ರತಿ ವರುಷಕ್ಕೆ ೨೫ ಇಂಚು ಬೀಳುವದು. ಸಮುದ್ರದ ಮಣ್ಣು, ನದಿಗಳಿಂದ ಹರಿದುಬಂದ ಮಣ್ಣು, ಮಳಲ ಮಣ್ಣು, ಸೌದೆಯ ಮಣ್ಣು, ಹೆಂಟೆಯ ಮಣ್ಣು, ಈ ಮೊದಲಾದವುಗಳೇ ಈ ದೇಶದಲ್ಲಿ ದೊರೆಯುವ, ಮುಖ್ಯವಾದ ಮಣ್ಣಿನ ಪ್ರಕಾರಗಳು. ಹೆಂಟೆಯ ಮಣ್ಣಿನ - ಭೂಮಿಗಳ ಬಹು ಭಾಗವನ್ನು ಹುಲ್ಲುಗಾವಲುಗಳಿಗಾಗಿ ಉಪಯೋಗಿಸುವರು.

## ಒಕ್ಕಲುತನ ಮತ್ತು ಶಿಕ್ಷಣ.

ಕೆಳಗಿನ ಪತ್ರಿಕೆಯು ಒಕ್ಕಲುತನದ ಪರಿಚಯವನ್ನುಂಟು ಮಾಡಿ ಕೊಡುವದು.

### (ನೂರಕ್ಕೆ ಪ್ರಮಾಣ)

| | |
|---|---|
| (೧) ಒಟ್ಟು ಜಮೀನು ಕ್ಷೇತ್ರದಲ್ಲಿ ಸಾಗುವಳಿಯಾದ ಕ್ಷೇತ್ರವು | ೭೨.[illegible] |
| (೨) ಸಾಗುವಳಿಯಾದ ಕ್ಷೇತ್ರದಲ್ಲಿ ಹುಲ್ಲುಗಾವಲು ಪ್ರದೇಶವು | ೪೯.೯ |
| (೩) ಸಾಗುವಳಿಗೆ ತಕ್ಕ ಜಮೀನಿನ ಪ್ರಮಾಣವು | ೪೬.೪ |
| (೪) ಸಾಗುವಳಿಯಾದ ಕ್ಷೇತ್ರದಲ್ಲಿ ತೋಟದ ಜಮೀನಿನ ಪ್ರಮಾಣವು | ೩.೭ |
| (೫) ಪಶುಗಳ ಸಂಖ್ಯೆ ಅಥವಾ ಪ್ರಮಾಣ | ೨೬.೮೧೦೦೦ |
| (೬) ಪ್ರತಿ ಹತ್ತು ' ಹೆ ' ಗಳಿಗೆ (೨೪. ೭೧ ಎಕರೆಗಳಿಗೆ ) ಪಶುಗಳ ಪ್ರಮಾಣವು | ೧೧.೨ |
| (೭) ಒಟ್ಟು ಪಶುಗಳಲ್ಲಿ ರಾಷ್ಟ್ರದ ದನಕರುಗಳ ಹಿಂಡಿನ ಪ್ರಮಾಣವು | ೭೧ |
| (೮) ಒಟ್ಟು ಪಶುಗಳಲ್ಲಿ ಕುದುರೆಗಳ ಹಿಂಡಿನ ಪ್ರಮಾಣವು | ೧೪ |
| (೯) ,, ,, ಹಂದಿಗಳ ಹಿಂಡಿನ ಪ್ರಮಾಣ | ೯ |
| (೧೦) ,, ,, ಕೋಳಿಗಳ ಹಿಂಡಿನ ಪ್ರಮಾಣ | ೪ |
| (೧೧) ,, ,, ಕುರಿಗಳ ಹಿಂಡಿನ ಪ್ರಮಾಣವು | ೨ |

ಕೆಳಗಿನ ಪತ್ರಿಕೆಯು ಯಾರು ಯಾರು ಎಷ್ಟು ಜಮೀನಗಳನ್ನು ಆಕ್ರಮಿಸಿರುವರೆಂಬುದನ್ನು ತೋರಿಸುತ್ತದೆ.
'ಹೆ' ಅಂದರೆ ಹೆಕ್ಟರೇಜ

| | | ಹೇಕ್ಟರೇಜ | ಎಕರೆಗಳು |
|---|---|---|---|
| ಒಕ್ಕಲಿಗರು | ೧೮೭೮೩೦ | ೧೯೬೩೦೫೩ | ೪೮೫೦೭೧೧ |
| ತೋಟಿಗರು | ೩೬೧೫೦ | ೬೪೯೪೪ | ೧೧೬೪೭೭ |
| "ಒಕ್ಕಲುತನದ ದುಡಿಮೆಗಾರರು | ೩೫೪೬೧ | ೧೫೫೭೫ | ೮೩೮೪೮೫ |
| ಬಿನ್ ಶೇತ್ಕಿ ಜನರು | ೧೧೦೮೪೮ | ೧೧೩೯೬೨ | ೨೮೧೬೦೦ |

ಕೆಳಗಿನ ಪತ್ರಿಕೆಯು ಜಮೀನಿನ ತುಂಡುಗಳ ಪ್ರಮಾಣವನ್ನು ತೋರಿಸುತ್ತದೆ.

| | ತುಂಡುಗಳು | ಒಟ್ಟು ಹೆಕ್ಟರೇಜ | ಒಟ್ಟು ಎಕರೆಗಳು |
|---|---|---|---|
| ೧ ರಿಂದ ೫ ಹೆ ( ೨. ೫ ರಿಂದ ೧೨.೫ ಎಕರೆಗಳು ) | ೧೦೩೪೭೧ | ೨೬೩೯೭೩ | ೬೫೨೨೭೭ |
| ೫ ರಿಂದ ೧೦ ಹೆ ( ೧೨. ೫ ರಿಂದ ೨೫ ಎಕರೆಗಳು ) | ೫೫೯೪೧ | ೪೦೨೨೩೧ | ೯೯೩೯೧೩ |
| ೧೦ ರಿಂದ ೨೦ ಹೆ ( ೨೫ ರಿಂದ ೫೦ ಎಕರೆಗಳು ) | ೪೬೧೪೪ | ೬೪೩೮೭೦ | ೧೫೯೧೨೦೩ |
| ೨೦ ರಿಂದ ೫೦ ಹೆ (೫೦ ರಿಂದ ೧೨೪ ಎಕರೆಗಳು ) | ೨೩೫೨೨ | ೬೭೦೩೬೩ | ೧೬೫೬೪೬೭ |
| ೫೦ ರಿಂದ ೧೦೦ ಹೆ (೧೨೪ ರಿಂದ ೨೪೭ ಎಕರೆಗಳು ) | ೧೬೧೫ | ೯೯೧೯೪ | ೨೪೫೧೦೯ |
| ೧೦೦ ಹೆ ಗಿಂತ ಹೆಚ್ಚಿಗೆ (೨೪೭ ಎಕರೆಗಳಿಗಿಂತಲೂ ಹೆಚ್ಚಿಗೆ ) | ೧೩೨ | ೪೧೬೦೭ | ೧೦೨೮೧೧ |
| ಒಟ್ಟು | ೨೩೦೮೨೫ | ೨೧೨೧೨೩೮ | ೫೨೪೧೭೭೯ |

ಕೆಳಗಿನ ಪತ್ರಿಕೆಯು ಒಕ್ಕಲು ಕುಳಗಳು ಧಾರಣಮಾಡಿದ ಜಮೀನಿನ ಪ್ರಮಾಣವನ್ನು ತೋರಿಸುತ್ತದೆ.

| | | ೧೯೩೦ | ೧೯೪೦ |
|---|---|---|---|
| (೧) | ಗ್ರ್ಯಾಂನಿಂಜೆನ್ | ೪೩. ೬ | ೪೯. ೦ |
| (೨) | ಫ್ರಿಸ್‌ಲ್ಯಾಂಡ | ೬೮. ೮ | ೭೧. ೭ |
| (೩) | ಡ್ರೆಂಥೆ | ೪೭. ೬ | ೫೩. ೧ |
| (೪) | ಓವ್ಹರಿಜ್‌ಸೆಲ್ | ೩೧. ೭ | ೩೪. ೫ |
| (೫) | ಗೋಲ್ಡರ್‌ಲ್ಯಾಂಡ | ೩೯. ೪ | ೪೪. ೦ |
| (೬) | ಯುಟ್ರೆಕ್ಟ್ | ೪೯. ೭ | ೫೩. ೫ |
| (೭) | ಉ. ಹಾಲಂಡ | ೫೫. ೬ | ೬೨. ೪ |
| (೮) | ದ. ಹಾಲಂಡ | ೫೮. ೩ | ೬೪. ೬ |
| (೯) | ಝೀಲಂಡ | ೬೧. ೨ | ೬೮. ೪ |
| (೧೦) | ಉ. ಬ್ರಾಬಂಟ | ೪೦. ೬ | ೪೪. ೦ |
| (೧೧) | ಲಿಮ್‌ಬರ್ಗ | ೪೮. ೩ | ೫೨. ೮ |

ಒಂಭತ್ತು ಕೋಟಿಗಿಂತಲೂ ಮಿಕ್ಕ ಜನತೆಯನ್ನು ಪೋಷಿಸಿ ಸಂರಕ್ಷಿಸ ಬೇಕಾಗಿರುವದರಿಂದ ಡಚ್ಚ ಒಕ್ಕಲಿಗರು ತಮ್ಮ ಕರ್ತೃತ್ವಶಕ್ತಿಯನ್ನು ಬೆಳೆಯಿಸಿಕೊಳ್ಳುವ ದೃಷ್ಟಿಯಿಂದ ಅವ್ಯಾಹತವಾಗಿ ದುಡಿಯಬೇಕಾಗುತ್ತದೆ. ಜಗತ್ತಿನಲ್ಲಿ ಅಧಿಕ ತತ್ಪರತೆಯ ಮತ್ತು ಪರಿಶ್ರಮದ ಒಕ್ಕಲುತನವೆಂದರೆ ಡಚ್ಚರ ಒಕ್ಕಲುತನವೇ ಸರಿ. ಇಲ್ಲಿಯ ಬೇರೆ ಬೇರೆ ಒಕ್ಕಲುತನದ ಬೆಳೆ ಗಳ ಹುಟ್ಟುವಳಿಯ ಸರಾಸರಿಯು ಜಗತ್ತಿನ ಮತ್ತು ಯುರೋಪ ಖಂಡದ ಹುಟ್ಟುವಳಿಯ ಸರಾಸರಿಗಿಂತ ಎಷ್ಟೋಪಾಲು ಹೆಚ್ಚಿಗಿದೆ. ಸಾಗುವಳಿಯ ಪರಿಪೂರ್ಣ ತಂತ್ರ, ಸುಶಿಕ್ಷತೆಯ ಸಾಧನಗಳ ವಿವೇಕ ಪೂರ್ಣ ಉಪಯೋಗ, ಬೀಜಗಳ ಆಯ್ಕೆಯಲ್ಲಿ ಸಾಕಷ್ಟು ದಕ್ಷತೆ, ಒಕ್ಕಲುತನದ ಪರಿಪಕ್ವಜ್ಞಾನ, ಬೇರೆ ಬೇರೆ ಪ್ರಕಾರದ ಬೆಳೆಗಳ ಆಯ್ಕೆ ಈ ಮೊದಲಾದವುಗಳ ಮೇಲೆಯೇ ಇಲ್ಲಿಯ ಹುಟ್ಟುವಳಿಯ ಹೆಚ್ಚಳವು ಬಹುಮಟ್ಟಿಗೆ ಅವಲಂಬಿಸಿವೆ. ದೇಶದ ಒಟ್ಟು ನಿರ್ಯಾತದಲ್ಲಿ ಒಕ್ಕಲು ತನದ ಹುಟ್ಟುವಳಿಯ ನಿರ್ಯಾತವು ನೂರಕ್ಕೆ ೩೦ ಕ್ಕಿಂತ ತುಸು ಹೆಚ್ಚಿಗೆ ಬೀಳುವದು. ಭೂಮಿಯ ಧಾರಣೆಯ ಪ್ರಮಾಣವು

ಚಿಕ್ಕದಾಗಿ, ಜನವಟ್ಟಣಿಯು ಅತಿಯಾಗಿರುವದರಿಂದ ಸಮುದ್ರದ ನೀರು ಒಳನುಗ್ಗದಂತೆ ಅವ್ಯಾಹತ ಪ್ರಯತ್ನಗಳನ್ನು ಮಾಡಲೇ ಬೇಕಾಗಿದೆ. ಡಚ್ಚ ಒಕ್ಕಲಿಗರು ದೇಶದ ಜನತೆಯ ಹೊಟ್ಟೆಯ ಭಾರವನ್ನು ಹೊರು ವದಷ್ಟೇ ಅಲ್ಲ, ಅದರ ಉತ್ಕರ್ಷಕ್ಕೂ ಬಹುಮಟ್ಟಿಗೆ ಕಾರಣರಾಗಿರುವರು. ಒಕ್ಕಲುತನದ ಸಾಧನ ಮತ್ತು ಆಹಾರ ಧಾನ್ಯಗಳ ಆಯಾತಕ್ಕಿಂತ ಒಕ್ಕಲುತನದ ಹುಟ್ಟುವಳಿಯ ನಿರ್ಯಾತವೇ ಬಹುಮಟ್ಟಿಗೆ ಹೆಚ್ಚಿಗಿದೆ. ಇದು ಕೆಳಗಿನ ಕಾರಣಗಳಿಂದ ಸಾಧ್ಯವಾಗಿದೆ.

(೧) ಸರಕಾರದವರ ಪ್ರಯತ್ನ

(೨) ಒಕ್ಕಲಿಗರ ಕರ್ತೃತ್ವಶಕ್ತಿ

(೩) ವರ್ಗಜೀವನದ ಮತ್ತು ಶಾಸನಬದ್ಧವಾದ ಸಂಘಟಿತ ಜೀವನದ ವಿಕಾಸ ಮತ್ತು ಸಹಕಾರ ತತ್ವಗಳ ಒಳಿಕೆ.

(೪) ಒಕ್ಕಲಿಗನ ನಿರಂತರವಾದ ಮತ್ತು ಕಠಿಣವಾದ ದುಡಿತ.

ಒಕ್ಕಲುತನ, ಮೀನ ಹಿಡಿಯುವ ವ್ಯವಸಾಯ ಮತ್ತು ಆಹಾ ರಗಳ ಮಂತ್ರಿಮಂಡಲದ ಚಟುವಟಿಕೆಗಳು ಮುಖ್ಯವಾಗಿ ಕೆಳಗಿನ ಅಂಶ ಗಳನ್ನು ಒಳಗೊಂಡಿರುವವು.

(ಅ) ಶಿಕ್ಷಣ ಮತ್ತು ವಿಷಯಜ್ಞಾನ ಪೂರೈಕೆ.

(ಬ) ಜಮೀನುಗಳ ಗೇಣಿ ಮತ್ತು ಸುಧಾರಣೆ.

(ಕ) ಪೇಟೆಯ ಮತ್ತು ವ್ಯವಹಾರದ ಪರಿಸ್ಥಿತಿಯ ಸಂಘಟನೆ.

(ಡ) ಪರದೇಶಗಳೊಡನೆ ಸಂಬಂಧ.

ನಿರಕ್ಷರತೆಯ ಪ್ರಮಾಣವು ನೂರಕ್ಕೆ ೦.೨ ರಂತೆ ಇದೆ. ಆದ ರಿಂದ ಹದಿನೈದು ವರುಷಗಳ ಬಾಲಕರಿಗೆಲ್ಲ " ಸಕ್ತಿ " ಶಿಕ್ಷಣದ ನಿಯಮವು ಅನ್ವಯಿಸುವದು. ಮಾಧ್ಯಮಿಕ ಶಿಕ್ಷಣದ ಶಾಲೆಗಳಿಗೆ ಹಜ ರಾಗಲಾರದ ಹನ್ನೆರಡು ವರ್ಷಗಳಿಗಿಂತ ದೊಡ್ಡ ಹುಡುಗರಿಗೆ ವೃತ್ತಿ ಶಿಕ್ಷಣದ ಶಾಲೆಗಳೂ ಇರುವವು. ಇಂಥ ವಿದ್ಯಾರ್ಥಿಗಳ ಭಾವೀ ಜೀವ ನಕ್ಕೆ ಅನುಕೂಲವಾಗುವಂತೆ ಈ ಶಾಲೆಗಳಲ್ಲಿ, ಔದ್ಯೋಗಿಕ ಶಿಕ್ಷಣ ವನ್ನಲ್ಲದೆ ಹೈನದ ವ್ಯವಸಾಯ, ಒಕ್ಕಲುತನ, ತೋಟದ ವ್ಯವಸಾಯ

ಈ ಮೊದಲಾದ ವಿಷಯುಗಳಿಗೆ ಸಂಬಂಧಪಟ್ಟ ಶಿಕ್ಷಣವನ್ನೂ ಕೊಡುವರು. ಹಾಲಂಡಿನಲ್ಲಿ ಆರು ಯುನಿವ್ಹರ್ಸಿಟಿಗಳಿದ್ದು ನಾಲ್ಕು ಯುನಿವ್ಹರ್ಸಿಟಿ ಕಾಲೇಜುಗಳಿವೆ. ವಾಗೆನಿಂಗೆನ್ನಿನಲ್ಲಿಯ ಒಕ್ಕಲುತನ ಕಾಲೇಜು ಪ್ರಶಂಸನೀಯವಾಗಿದೆ. ಕೆಳಗಿನ ಪತ್ರಿಕೆಯು ದೇಶದ ವಿದ್ಯಾರ್ಥಿಗಳಿಗೆ ತೋಟದ ವ್ಯವಸಾಯ ಮತ್ತು ಒಕ್ಕಲುತನದ ಉದ್ಯೋಗಗಳ ಬಗೆಗೆ ಸಿಗುವ ಸೌಕರ್ಯದ ಪರಿಚಯುವನ್ನುಂಟು ಮಾಡಿ ಕೊಡುವದು.

## ಒಕ್ಕಲುತನ ತೋಟದ ವ್ಯವಸಾಯ

| | ಶಿಕ್ಷಣದ ಸಂಸ್ಥೆಗಳು | ವಿದ್ಯಾರ್ಥಿಗಳು | ಶಿಕ್ಷಣದ ಸಂಸ್ಥೆಗಳು | ವಿದ್ಯಾರ್ಥಿಗಳು |
|---|---|---|---|---|
| ಕಾಲೇಜುಗಳು | ೬ | ೩೯೧ | ೨ | ೯೭ |
| ಮಾಧ್ಯಮಿಕ ಶಾಲೆಗಳು (ಚಳಿಗಾಲವಲ್ಲಿ) | ೩೯ | ೨೭೦೧ | ೮ | ೭೯೧ |
| ಪ್ರಾಥಮಿಕ ಶಾಲೆಗಳು | ೧೮೦ | ೧೪೩೧೧ | ೪೯ | ೨೪೯೦ |
| ವ್ಯವಹಾರ ಶಾಲೆಗಳು | ೩ | ೪೨ | ೬೪ | ೧೩೩೯ |
| ಸಹಾಯಧನದಲ್ಲಿ ನಡೆಯುವ ಅಲ್ಪಾವಧಿಯ ಶಿಕ್ಷಣ ಕ್ರಮಗಳು | ೧೩೨೪ | ೧೮೯೯ | ೭೧೬ | ೧೨೯೫೦ |

ಸರಕಾರದವರು ವ್ಯಾಪಕವಾಗಿ ಹರಡಿದ ಸಂಶೋಧನ ಸಂಸ್ಥೆಗಳ ಚಟುವಟಿಕೆಗಳ ಲಾಭವನ್ನೂ ಶಿಕ್ಷಣದ ಮತ್ತು ವೃತ್ತಿಶಿಕ್ಷಣದ ಸೌಕರ್ಯಗಳನ್ನೂ ಇಲ್ಲಿಯ ಒಕ್ಕಲಿಗರು ತುಂಬಾ ಪಡೆಯುವರು. ಇವರಿಗೆ ತಮ್ಮ ಹಿತ ಹೊಣೆಗಳ ಕಲ್ಪನೆಯು ಸಂಪೂರ್ಣವಾಗಿರುವದು. ತಮ್ಮ ಒಕ್ಕಲುತನದ ಸುಧಾರಣೆಗಾಗಿ ಸರಕಾರದವರು ಹಾಕುವ ಯಾವದೇ ಯೋಜನೆಯನ್ನು ಅವರು ತೀವ್ರವಾಗಿ ಸ್ವೀಕರಿಸಿ, ಅದರ ತತ್ವಗಳನ್ನು ಕ್ರಮಗಳನ್ನು ಸಂಶೋಧನೆಯ ಮುಖಾಂತರ ಗಟ್ಟಿಗೊಂಡ ಪದ್ಧತಿಗಳನ್ನು ಶೀಘ್ರವಾಗಿ ಬಳಕೆಯಲ್ಲಿ ತರುವರು.

ಪ್ರತಿಯೊಂದು ಹಳ್ಳಿಯಲ್ಲಿಯೂ ಒಕ್ಕಲಿಗರ ಹಿತಸಂವರ್ಧನೆಗಾಗಿ ಒಕ್ಕಲಿಗರ ಸಂಸ್ಥೆಯು ಸ್ಥಾಪಿತವಾಗಿವೆ, ಅಲ್ಲದೆ ಬಹುತರ ಎಲ್ಲ ಹಳ್ಳಿ

ಗಳಲ್ಲಿಯೂ ಒಕ್ಕಲುತನದ ಕೂಲಿಕಾರರ ಅಥವಾ ದುಡಿಮೆಗಾರರ ಸಂಸ್ಥೆಗಳೂ ಇವೆ. ಈ ಸಂಸ್ಥೆಗಳು ಪ್ರಾಂತಿಕ ಸಂಸ್ಥೆಗಳಿಗೆ ಸಮಾವೇಶವಾಗಿವೆ. ಪ್ರಾಂತಿಕ ಸಂಸ್ಥೆಗಳು ರಾಷ್ಟ್ರದ ಸಂಸ್ಥೆಗಳಿಗೆ ಸಮಾವೇಶವಾಗಿವೆ. ಧಾರ್ಮಿಕ ತತ್ವಗಳ ತಳಹದಿಯ ಮೇಲೆ ಒಕ್ಕಲಿಗರ ಸಂಸ್ಥೆಗಳು ಸ್ಥಾಪಿತವಾಗಿವೆ. ಅಲ್ಲದೆ ರೋಮನ್ ಕ್ಯಾಥೋಲಿಕ್ ಮತ್ತು ಬಿನ್ ರೋಮನ್ ಕ್ಯಾಥೋಲಿಕ್ ಜನರ ಸಲುವಾಗಿ ಬೇರೆ ಬೇರೆ ಸಂಸ್ಥೆಗಳೂ ಉಂಟು. ದೇಶದಲ್ಲೆಲ್ಲ ಕೆಳಗಿನ ಮೂರು ಸರ್ವಸಾಮಾನ್ಯ ಸರ್ವಮಾನ್ಯ, ಒಕ್ಕಲುತನದ ಸಂಸ್ಥೆಗಳು ಕಾರ್ಯವನ್ನು ಏಕಕಾಲದಲ್ಲಿ ನಿರ್ವಹಿಸಿಕೊಂಡು ಹೋಗುವವು.

೧. ದಿ ರಾಯಲ್ ನೆದರ್‌ಲಂಡ್ಸ ಅಗ್ರಿಕಲ್ಚರಲ್ ಕಮೀಟಿ (ಕೇ. ಎನ್. ಎಲ್. ಸಿ.)

೨. ದಿ ರೋಮನ್ ಕ್ಯಾಥೋಲಿಕ್ ನೆದರ್‌ಲಂಡ್ಸ ಫಾರ್ಮರ್ಸ ಆ್ಯಂಡ ಗ್ರೋಅರ್ಸ ಯುನಿಯನ್ (ಕೇ. ಎನ್. ಬಿ. ಟಿ. ಬಿ.)

೩. ದಿ. ಕ್ರಿಶ್ಚಿಯನ್ ಫಾರ್ಮರ್ಸ ಆ್ಯಂಡ ಗ್ರೋಅರ್ಸ ಯುನಿಯನ್ (ಸಿ. ಬಿ. ಟಿ. ಬಿ.)

## ಒಕ್ಕಲುತನದ ದುಡಿಮೆಗಾರರ ಸಂಸ್ಥೆಗಳು

೧ ದಿ ನೆದರ್‌ಲಂಡ್ಸ ಯುನಿಯನ್ ಆಫ್ ವರ್ಕರ್ಸ ಇನ್ ಅಗ್ರಿಕಲ್ಚರ ಆ್ಯಂಡ ಹಾರ್ಟಿಕಲ್ಚರ ಆ್ಯಂಡ ಡೇಅರಿ ಇಂಡಸ್ಟ್ರಿ

೨ ದಿ ನೆದರ್‌ಲಂಡ್ಸ ರೋಮನ್ ಕ್ಯಾಥೋಲಿಕ್ ಯುನಿಯನ್ ಆಫ್ ಅಗ್ರಿಕಲ್ಚರಲ್ ವರ್ಕರ್ಸ (ಎಸ್. ಬಿ. ಓಯುಸ್ ಡೆಡಿಟ್)

೩ ದಿ ನೆದರ್‌ಲಂಡ್ಸ ಕ್ರಿಶ್ಚನ್ ಯುನಿಯನ್ ಆಫ್ ಅಗ್ರಿಕಲ್ಚರಲ್ ವರ್ಕರ್ಸ.

ಒಕ್ಕಲಿಗರ ಸಾಮಾನ್ಯ ಹಿತವನ್ನು ಲಕ್ಷಿಸುವ ಈ ಸಂಸ್ಥೆಗಳ ಜೊತೆಗೆ ಬೇರೆ ಬೇರೆ ಪ್ರಕಾರದ ಹುಟ್ಟುವಳಿಗಾರರ ವಿಶಿಷ್ಟ ಹಿತವನ್ನು ಅನುಲಕ್ಷಿಸುವ ಅನೇಕ ದೊಡ್ಡ ದೊಡ್ಡ ಸಂಸ್ಥೆಗಳೂ ಉಂಟು.

# ಗೋ— ಸಂಗೋಪನೆ

ಹಾಲು ಹೈನದ ಸಲುವಾಗಿಯೇ ಮುಖ್ಯವಾಗಿ ಗೋವುಗಳ ಸಂಗೋಪನೆಯನ್ನು ಮಾಡುತ್ತಿರುವರು. ಗೋ-ಮಾಂಸಕ್ಕಾಗಿ ಅವುಗಳನ್ನು ರಕ್ಷಿಸುವದು ಎರಡನೆಯ ಮಹತ್ವದ ವಿಚಾರವು. ದೇಶದಲ್ಲಿಯ ಗೋ-ಸಂಪತ್ತಿನ ಕಲ್ಪನೆಯನ್ನು ಕೆಳಗಿನ ಪತ್ರಿಕೆಯು ಮಾಡಿಕೊಡುವದು.

| ಗೋವುಗಳ ಪ್ರಕಾರಗಳು | ಸಂಖ್ಯೆ |
|---|---|
| ೧ ಸಣ್ಣ ಸಣ್ಣ ದನಕರುಗಳು | ೯, ೬೩, ೬೬೬ |
| ೨ ಈಯಲಾದ ಮತ್ತು ಹಿಂಡುವ ಆಕಳುಗಳು | ೧೩, ೨೫, ೮೩೫ |
| ೩ ಒಂದು ವರ್ಷಕ್ಕಿಂತ ದೊಡ್ಡವಿದ್ದ ಹೋರಿಗಳು | ೨೪, ೭೫೬ |
| ೪ ಕೊಬ್ಬಿದ ದನಗಳು | ೫೨, ೪೫೪ |

## ದನಗಳ ತಳಿಗಳು

ಈ ದೇಶದಲ್ಲಿ ದನಗಳ ಮೂರು ಪ್ರಕಾರಗಳಿರುವವು.

[೧] ದಿ. ಬ್ಲ್ಯಾಕ ಆ್ಯಂಡ ವ್ಹಾಯಿಟ್. ಡಚ್ ಫ್ರೀಝಿಯನ್ ಕ್ಯಾಟಲ್ (೭೦ ./.) ( ಕರಿ ಬಿಳಿ ಬಣ್ಣದ ದನಗಳು. )

[೨] ದಿ ರೆಡ್ ಆ್ಯಂಡ ವ್ಹಾಯಿಟ್ ಮ್ಯೂಜ ರಾಯಿನ್ ಯಿಝ್ಸಿಲ್ ಕ್ಯಾಟಲ್ [ ೨೫ ./. ] [ ಕೆಂಪು ಬಿಳಿ ಬಣ್ಣದ ದನಕರುಗಳು. ]

[೩] ದಿ ಗ್ರಾನಿಂಜೆನ್ ಬ್ಲ್ಯಾಕ್ ವ್ಹಾಯಿಟ್ ಹೆಡ್ ಕ್ಯಾಟಲ್ [ ೫ ./. ] [ ಕಪ್ಪು ಬಿಳಿ ತಲೆಯ ದನಕರುಗಳು. ]

**ಹೈನದ ವ್ಯವಸಾಯ:—** ಹಾಲಿನ ವಾರ್ಷಿಕ ಹುಟ್ಟುವಳಿಯು ಐವತ್ತು ಲಕ್ಷ ಮೆಟ್ರಿಕ್ ಟನ್ನುಗಳಷ್ಟು ಆಗುವದು. ಇದರಲ್ಲಿ ನೂರಕ್ಕೆ ೪೫ ರಷ್ಟು ನಿರ್ಯಾತವಾಗಿ ೫೫ ರಷ್ಟು ದೇಶದ ಜನತೆಗಾಗಿ ಬಳಸಲ್ಪಡುವದು.

**ಕುರಿಗಳ ಸಂಗೋಪನೆ:—** ಕುರಿ, ಟಗರುಗಳು ಕೂಡಿ ಒಟ್ಟಿಗೆ ೪, ೫೨, ೩೭೮ ಇದ್ದು ಇವುಗಳ ಸವಿಸ್ತಾರ ಪರಿಚಯವು ಕೆಳಗಿನಂತಿದೆ.

| ಕುರಿಗಳ ಪ್ರಕಾರಗಳು | ಸಂಖ್ಯೆ |
|---|---|
| ಹೆಣ್ಣು ಕುರಿಗಳು | ೧,೧೩,೪೯೭ |
| ಗಂಡು ಕುರಿ ಅಥವಾ ಟಗರುಗಳು | ೮೫,೭೪೮ |
| ತಳಿಯ ಸಲುವಾಗಿ ಮೀಸಲಾದ ಹೆಣ್ಣು ಕುರಿಗಳು | ೨,೫೬,೯೪೨ |
| " " " ಟಗರುಗಳು | ೯,೭೪೮ |
| ಉಳಿದ ಕುರಿಗಳು | ೧೩,೪೪೮ |

ಇಲ್ಲಿಯ ಎಲ್ಲ ಕುರಿಗಳ ಉಣ್ಣೆಯ ವಾರ್ಷಿಕ ಆದಾಯವು ೧೭೦೦ ಮೆಟ್ರಿಕ್ ಟನ್ನುಗಳಷ್ಟು ಆಗುವದು. ಇವರಲ್ಲಿ ನೂರಕ್ಕೆ ಎಪ್ಪತ್ತರಷ್ಟು ಉಣ್ಣೆಯು ದೇಸೀಯ ತಳಿಯ (ಡೆಕ್ಕನ್ನಿಯಲ್ ಬ್ರೀಡ) ಕುರಿಗಳಿಂದ ಹೊರಡುತ್ತದೆ.

**ಹಂದಿ ಮತ್ತು ಕೋಳಿ ಸಾಕುವದು:—** ಒಟ್ಟಿಗೆ ೮,೫೭,೮೭೩ ಹಂದಿಗಳಿದ್ದು ಅವುಗಳ ಮಾಹಿತಿಯು ಕೆಳಗಿನಂತಿರುವದು.

| ಪ್ರಕಾರಗಳು | ಸಂಖ್ಯೆ |
|---|---|
| [೧] ಒಂದೂವರೆ ತಿಂಗಳಿಗಿಂತ ಚಿಕ್ಕ ಹಂದಿಗಳು | ೨,೬೧,೩೭೪ |
| [೨] ಒಂದೂವರೆ ತಿಂಗಳಿಗಿಂತ ದೊಡ್ಡವಿದ್ದ ಮತ್ತು ಅರವತ್ತು ಕಿಲೊ ಗ್ರಾಮುಗಳಷ್ಟು [K G] ಭಾರವಿರುವ ಹಂದಿಗಳು | ೩,೮೫,೫೫೬ |
| [೩] ೬೦-೯೫ ಕಿ. ಗ್ರಾ. ದಷ್ಟು ಭಾರವಿರುವ ಹಂದಿಗಳು | ೫೮,೮೮೨ |
| [೪] ೯೫-೧೫೦ " " | ೭,೩೫೨ |
| [೫] ೧೫೦ ಕಿ. ಗ್ರಾ. ಗಿಂತ ಹೆಚ್ಚು ಭಾರವಿರುವ ಹಂದಿಗಳು | ೫೫೧ |
| [೬] ದೊಡ್ಡದಾಗಿ ಬಿಟ್ಟ ಹೆಣ್ಣು ಹಂದಿಗಳು | ೩,೦೫೯ |
| [೭] ತಳಿಗಾಗಿ ಬಿಟ್ಟ ಹೆಣ್ಣು ಹಂದಿಗಳು | ೧,೩೭,೭೬೦ |
| [೮] ಸೇವೆಗಾಗಿ ಕಾಯ್ದಿಟ್ಟ ಗಂಡು ಹಂದಿಗಳು | ೩,೧೭೯ |

ನೆದರ್ಲಾಂಡಿನ ಹಂದಿಗಳ ತಳಿಗಳಲ್ಲಿ ಎರಡು ಪ್ರಕಾರಗಳು.

[೧] ಸುಧಾರಿಸಿದ ನೆದರ್ಲಾಂಡ್ಸ ಲ್ಯಾಂಡರೇಸ [ಫಾರ್ ವ್ಹಿಲ್ಟ ಶಾಯರ್ ಬೇಕನ್ ಮ್ಯಾನ್ಯೂ ಫ್ಯಾಕ್ಚರ] ಮತ್ತು

[೨] ನೆದರ್ಲಂಡ್ಸ್ ಲಾರ್ಜ ವ್ಹಾಯಿಟ್ [ ಹೆಚ್ಚಿನ ನೆಣಕ್ಕಾಗಿ ಇರುವ ಹಂದಿಗಳು. ]

ಕೋಳಿಗಳ ಸಂಖ್ಯೆಯು ೬೫೦೦೦೦೦ ಇದೆ. ತತ್ತಿಗಳ ಹುಟ್ಟುವಳಿಯು ೧೨೭೮ ೧೩೦೦೦೦ ಇದ್ದು ಇವುಗಳಲ್ಲಿ ೩೫೩,೧೫೫೦೦೦ ತತ್ತಿಗಳು ನಿರ್ಯಾತವಾಗಿ ೮೩೭೦ ೭೫೦೦೦ ತತ್ತಿಗಳು ದೇಶದ ಜನರ ಸಲುವಾಗಿ ಉಪಯೋಗಿಸಲ್ಪಡುತ್ತವೆ.

ಮೀನು ಹಿಡಿಯುವದೂ ದೇಶದ ಮಹತ್ವದ ಉದ್ಯೋಗಗಳಲ್ಲಿ ಒಂದಾಗಿದೆ.

## ಸಹಕಾರಿ ಸಂಘಗಳು

ಇಲ್ಲಿಯ ಸಹಕಾರಿ ಸಂಘಗಳೇ ಒಕ್ಕಲುತನದ ಹುಟ್ಟುವಳಿಯ ಮತ್ತು ಮಾರಾಟದ ಹೊಣೆಯನ್ನು ಹೊತ್ತಿರುತ್ತವೆ. ದೇಶದಲ್ಲಿ ಬೇರೆ ಬೇರೆ ಪ್ರಕಾರದ ಅನೇಕ ಸಹಕಾರಿ ಸಂಘಗಳಿವೆ.

ಡಚ್ಚ ಒಕ್ಕಲಿಗರು ಪರಿಶ್ರಮದಲ್ಲಿ ಪ್ರಸಿದ್ಧರು. ಚಳಿಗಾಲದಲ್ಲಿ ಕೂಡ, ಮುಂಜಾನೆಯಿಂದ ಸಂಜೆಯವರೆಗೆ ಅವಿಶ್ರಾಂತವಾಗಿ ಡಚ್ಚ ಒಕ್ಕಲಿಗನು ತನ್ನ ಕುಟುಂಬ ಸಹಿತವಾಗಿ ಹೊಲಗಳಲ್ಲಿ ದುಡಿಯುತ್ತಾನೆ. ಅವನ ವ್ಯವಸ್ಥೆಯೂ ಸರಿಯಾಗಿರುವದು.

## ಉದ್ಯೋಗಗಳು

ಪಕ್ಕಾ ಮಾಲನ್ನು ತಯಾರಿಸಲು ಅಗತ್ಯವಿರುವ ಕಚ್ಚಾ ಮಾಲಿನ ಬಹು ಭಾಗವು ಪರದೇಶಗಳಿಂದ ಆಯಾತವಾಗುತ್ತಿದ್ದರೂ, ದಿನ ದಿನಕ್ಕೆ ಬೆಳೆಯುತ್ತಿರುವ ಜನಸಂಖ್ಯೆಯ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸಿ, ಉದ್ಯೋಗಗಳನ್ನು ಕಲ್ಪಿಸುವ ದೃಷ್ಟಿಯಿಂದ, ಹೊಸ ಹೊಸ ಉದ್ಯೋಗಗಳು ಪ್ರಚಾರದಲ್ಲಿ ಬರುತ್ತಲೇ ಇವೆ. ಅನೇಕ ಉದ್ಯೋಗಗಳು ಜನ್ಮವೆತ್ತಿ ಪ್ರಗತಿ ಪಥದಲ್ಲಿರುವವು. ಕಚ್ಚಾ ಮಾಲಿನಿಂದ ಪಕ್ಕಾ ಮಾಲನ್ನು ತಯಾರಿಸುವದೇ ಡಚ್ಚರ ಪ್ರಮುಖ ಉದ್ಯೋಗವಾಗಿದೆ. ಆದುದರಿಂದ ಪರದೇಶಗಳಿಗೆ ಕಳಿಸುವ ಸಲುವಾಗಿ ಕಚ್ಚಾ ಮಾಲಿನಿಂದ ಪಕ್ಕಾ ಮಾಲನ್ನು ತಯಾರಿಸುವರವರು. ಹೆಚ್ಚಾಗಿ ಎಣ್ಣೆ ಕಲ್ಲಿದ್ದಲಿಗಳ ಸಹಾಯದಿಂದ ತಮ್ಮ ಉದ್ಯೋ

ಗಗಳ ಚಾಲನೆಗೆ ಶಕ್ತಿ ಪೂರೈಕೆಯ ವ್ಯವಸ್ಥೆಯನ್ನು ಮಾಡಿಕೊಳ್ಳುವರು. ನೆದರ್ಲಂಡಿನಲ್ಲಿ ದೊರೆಯಬಹುದಾದ ಖನಿಜ ಪದಾರ್ಥಗಳೆಂದರೆ ಎಣ್ಣೆ ಮತ್ತು ಕಲ್ಲಿದ್ದಲಿ. ಎಣ್ಣೆ ನೂರಕ್ಕೆ ೩೫ ರಂತೆ, ಕಲ್ಲಿದ್ದಲಿ ನೂರಕ್ಕೆ ೭೫ ರಂತೆ ದೊರೆಯುತ್ತದೆ. ಉಪ್ಪು ಹೇರಳವಾಗಿ ಸಿಗುತ್ತದೆ. ನೇಯ್ಗಾರಿಕೆಯ ಉದ್ಯೋಗ, ನಾನಾ ಪ್ರಕಾರದ ಬಣ್ಣಗಳು ಗೋಡೆಗಳಿಗೆ ಚಿತ್ರಗಳಿಗೆ ಹಚ್ಚುವ ರಂಗುಗಳು, ಚರ್ಮಕಾರದ ಉದ್ಯೋಗ, ವಿದ್ಯುತ್ತಿನ ಯಾಂತ್ರಿಕ ಉಪಕರಣಗಳು, ಬಾನುಲಿಯ ಸಾಮಾನುಗಳ ಜೋಡಣೆಗಳು, ಕಾಗದ, ಕಾಜ, ಈ ಮೊದಲಾದವುಗಳನ್ನು ತಯಾರಿಸುವ ಉದ್ಯೋಗಗಳು ಇಲ್ಲಿಯ ಪ್ರಮುಖ ಉದ್ಯೋಗಗಳು. ತೋಟದ ವ್ಯವಸಾಯ, ಆಹಾರವನ್ನು ತಯಾರಿಸುವ ಉದ್ಯೋಗ, ಮತ್ತು ಉನ್ನತ ಸ್ಥಿತಿಯಲ್ಲಿರುವ ಹೈನದ ವ್ಯವಸಾಯ ಈ ಮೊದಲಾದವುಗಳಿಂದ ಆದಾಯದ ಮಟ್ಟವು ಮೇಲಕ್ಕೇರುತ್ತಿದೆ. ಕಡಲ ತಡಿಯ ನಾಡಾಗಿರುವದರಿಂದ, ಡಚ್ಚರು ಜಲಪರ್ಯಟಣದಿಂದ, ಹಡಗುಗಳನ್ನು ಕಟ್ಟುವದರಿಂದ ಸಾಕಷ್ಟು ಸಂಪಾದನೆ ಮಾಡಿಕೊಳ್ಳುವರು. ಗ್ರೇಟ ಬ್ರಿಟನ್ ಮತ್ತು ಯುನಾಯಿಟೆಡ್ ಸ್ಟೇಟ್ಸ ಆಫ್ ಅಮೇರಿಕಾ ದೇಶಗಳ ನಂತರ, ಸದ್ಯಕ್ಕೆ ನೆದರ್ಲಂಡು, ಹಡಗುಗಳನ್ನು ಕಟ್ಟುವ ಉದ್ಯೋಗದಲ್ಲಿ ಜಗತ್ತಿನಲ್ಲಿಯೇ ನಾಲ್ಕನೆಯ ಸ್ಥಾನವನ್ನು ಪಡೆದಿದೆ. ೧೯೩೮ ರಲ್ಲಿ ಪರದೇಶದ ನಾಣ್ಯಗಳಲ್ಲಿ, ಹೇಳಬೇಕಾದರೆ, ಹಡಗುಗಳನ್ನು ಕಟ್ಟುವ ಮತ್ತು ದುರಸ್ತಿ ಮಾಡುವ ವ್ಯವಸಾಯವೊಂದರಿಂದಲೇ ಸುಮಾರು ಇಪ್ಪತ್ತು ಕೋಟಿ ಗಿಲ್ಡರಗಳಷ್ಟು ಉತ್ಪನ್ನವು ಬಂದಿತು. ಹಡಗು ಕಟ್ಟುವ ವ್ಯವಸಾಯವು ದೇಶದ ಅತಿ ಮಹತ್ವದ ಉದ್ಯೋಗಗಳಲ್ಲಿ ಒಂದಾಗಿದೆ. ಈ ಪ್ರಮುಖ ವ್ಯವಸಾಯಕ್ಕೆ ಸಂಬಂಧಪಟ್ಟ ಮುನ್ನೂರು ಸಣ್ಣ ದೊಡ್ಡ ಉದ್ಯೋಗಗಳು ನಡೆದಿದ್ದು, ಇವುಗಳಲ್ಲಿ ಸುಮಾರು ೪೫೦೦೦ ಜನರು ದುಡಿಯುತ್ತಿರುವರು. ಕೆಳಗಿನ ಪತ್ರಿಕೆಯು ದೇಶದ ಮಹತ್ವದ ಬೇರೆ ಬೇರೆ ಉದ್ಯೋಗಳಲ್ಲಿ ತೊಡಗಿದ ಜನರ ಸಂಖ್ಯೆಯ ಪ್ರಮಾಣವನ್ನು ತೋರಿಸುವದು.

| ಉದ್ಯೋಗಗಳು | ತೊಡಗಿದ ಜನರು |
|---|---|
| (೧) ಸಾರ್ವಜನಿಕ ಹಿತಸಂಬಂಧವ ಉದ್ಯೋಗಗಳು | ೨೦,೦೦೦ |
| (೨) ಲೋಹ ಅಥವಾ ಧಾತು ಶೋಧನ ಉದ್ಯೋಗಗಳು | ೨,೫೦೦೦೦ |
| (೩) ಹಡಗು ಕಟ್ಟುವದು | ೪೫೦೦೦ |
| (೪) ರಸಾಯನಿಕ ಉದ್ಯೋಗಗಳು | ೪೫೦೦೦ |
| (೫) ಕುಂಬಾರಿಕೆಯ ಉದ್ಯೋಗಗಳು | ೪೫೦೦೦ |
| (೬) ನೇಯ್ಗಾರಿಕೆಯ ಉದ್ಯೋಗ | ೧೭೦೦೦೦ |
| (೭) ಕಾಗದ ಮತ್ತು ಗ್ರಾಫ (Graph) ತಯಾರಿಸುವ ಉದ್ಯೋಗ | ೫೦೦೦೦ |
| (೮) ಅರಿವೆಗಳನ್ನು ತಯಾರಿಸುವ ಉದ್ಯೋಗ | ೬೦೦೦೦ |
| (೯) ಹದಗೊಳಿಸಿದ ತೊಗಲು ಉದ್ಯೋಗ | ೩೦೦೦೦ |
| (೧೦) ಉಣ್ಣೆ ನೇಯ್ಗಾರಿಕೆಯ ಉದ್ಯೋಗ | ೩೮೦೦೦ |
| (೧೧) ಆಹಾರ ಸತ್ವವನ್ನು ತಯಾರಿಸುವ ಉದ್ಯೋಗ | ೧೩೦೦೦೦ |

ವಿದ್ಯುತ್ತಿನ ಯಾಂತ್ರಿಕ ಉಪಕರಣಗಳ ಉದ್ಯೋಗಗಳು ಪ್ರಶಂಸನೀಯವಾಗಿವೆ. ಫಿಲಿಪ್ ಕಂಪನಿಯು ಬಾನುಲಿ ಮತ್ತು ವಿದ್ಯುತ್ತಿನ ಯಾಂತ್ರಿಕ ಸಾಮಾನುಗಳನ್ನು, ಜೋಡಣೆಗಳನ್ನು ಪರದೇಶಗಳಿಗೆ ಕಳಿಸುವದು.

## ನಿರ್ಯಾತ

೧೯೪೯ ರಲ್ಲಿ ಇದ್ದ ಈ ದೇಶದ ನಿರ್ಯಾತವು ಕೆಳಗಿನ ಅಂಕಿಗಳಿಂದ ಗೊತ್ತಾಗುವದು.

| | ಗಿಲ್ಡರುಗಳು * |
|---|---|
| [೧] ಹಾಲು ಹೈನದಿಂದ ತಯಾರಾದ ಸಾಮಾನು | ೫೫೮೦೦,೦೦೦೦ |
| [೨] ನೇಯ್ಗಾರಿಕೆಯ ಸಾಮಾನುಗಳು | ೩೩೧೦೦೦,೦೦೦ |
| [೩] ಯಾಂತ್ರಿಕ ಮತ್ತು ವಿದ್ಯುತ್ತಿನ ಉಪಕರಣಗಳು ಮತ್ತು ಸಾಮಾನುಗಳು | ೩೭೯೦೦೦,೦೦೦ |
| [೪] ಉಕ್ಕು ಮತ್ತು ಉಕ್ಕಿನ ಸಾಮಾನುಗಳು | ೧೪೯೦೦೦,೦೦೦ |

* ಒಂದು ನೂರು ಗಿಲ್ಡರುಗಳು ಅಂದರೆ ನಮ್ಮ ಹಿಂದುಸ್ತಾನದ ೧೨೫ ರೂಪಾಯಿ

| | | |
|---|---|---|
| [೫] | ಸಾರಿಗೆಯ ಸಾಧನೆಯ ಸಾಮಾನುಗಳು | ೧೪೫೦೦೦,೦೦೦ |
| [೬] | ತಾಜಾ ಮತ್ತು ಕಾಯ್ದಿಟ್ಟ ಕಾಯಿಪಲ್ಯೆಗಳು | ೧೪೨೦೦೦,೦೦೦ |
| [೭] | ತವರು ಮತ್ತು ತವರಿನ ಸಾಮಾನುಗಳು | ೧೩೫೦೦೦,೦೦೦ |
| [೮] | ಆಲುಗಡ್ಡೆಗಳು | ೧೦೪೦೦೦,೦೦೦ |
| [೯] | ಸಕ್ಕರೆ | ೯೭೦೦೦,೦೦೦ |
| [೧೦] | ಮುರಬ್ಬಾ | ೮೯೦೦೦,೦೦೦ |
| [೧೧] | ಖನಿಜ ಪದಾರ್ಥಗಳು | ೮೬೦೦೦,೦೦೦ |
| [೧೨] | ಹೂ ಬುರುಡೆಗಳು | ೮೩೦೦೦,೦೦೦ |
| [೧೩] | ರಸಾಯನಿಕ ಮತ್ತಿತರ ಸಾಮಾನುಗಳು | ೭೪೦೦೦,೦೦೦ |
| [೧೪] | ಕಾಯ್ದಿಟ್ಟ ಮಾಂಸ | ೭೩೦೦೦,೦೦೦ |
| [೧೫] | ಕಾಗದ ಮತ್ತು ಹತ್ತಿ | ೬೫೦೦೦,೦೦೦ |
| [೧೬] | ತತ್ತಿಗಳು | ೬೫೦೦೦,೦೦೦ |
| [೧೭] | ಹಿಟ್ಟಿನ ಆಲುಗಡ್ಡೆ ಮತ್ತು ಅನ್ನಗಳ ಪದಾರ್ಥಗಳು | ೬೪೦೦೦,೦೦೦ |
| [೧೮] | ಮಳಲು | ೫೦೦೦,೦೦೦ |
| [೧೯] | ಇತರ ವಸ್ತುಗಳು | ೧೨೦೦,೦೦೦,೦೦೦ |
| | ಒಟ್ಟು | ೩೯೭೪,೦೦೦,೦೦೦ |

## ಆಯಾತ

೧೯೪೯ ರಲ್ಲಿ ಆಯಾತ ಪದಾರ್ಥಗಳ ಬೆಲೆಯು ಒಟ್ಟಿಗೆ ೫೨೯-೭೦೦೦೦೦೦ ಗಿಲ್ಡರಗಳಾದರೆ, ನಿರ್ಯಾತ ಪದಾರ್ಥಗಳ ಬೆಲೆಯು ಒಟ್ಟಿಗೆ ೩೬೯೪೦೦೦೦೦೦ ಗಿಲ್ಡರಗಳಾಯಿತು. ಈ ದೃಷ್ಟಿಯಿಂದ ನೋಡಿದರೆ ವ್ಯಾಪಾರದ ಪರಿಸ್ಥಿತಿಯು ಅಷ್ಟು ಅನುಕೂಲವಿಲ್ಲವೆಂದು ಹೇಳಬಹುದು. ಆದರೆ ಉತ್ಪಾದನೆಯನ್ನು ಹೆಚ್ಚಿಸಿ, ಆಯಾತಗಳ ಮೇಲೆ ನಿರ್ಬಂಧಗಳನ್ನು ಹೇರಿ, ನಿರ್ಯಾತಗಳ ಪ್ರಮಾಣವನ್ನು ಬೆಳೆಸಿ, ಮತ್ತು ಸದ್ಯದ ತಾತ್ಕಾಲಿಕ ಅಡಚಣೆ ಆವಶ್ಯಕತೆಗಳನ್ನು ಬದಿಗೊತ್ತಿ ಆದಷ್ಟು ಮಟ್ಟಿಗೆ ತಗ್ಗಿ, ಆಯಾತ ನಿರ್ಯಾತಗಳ ನಡುವಿನ ಕೊರತೆಯಂತಹ ಭಯಂಕರ ದೊಡ್ಡ ಅಂತರವನ್ನು ತುಂಬಿಕೊಳ್ಳಲು, ದೇಶವು ಹೆಣಗಾಡುತ್ತಿದೆ.

ಆಡಳಿತೆಯ ದೃಷ್ಟಿಯಿಂದ ದೇಶವನ್ನು ಹನ್ನೊಂದು ಪ್ರಾಂತಗಳನ್ನಾಗಿ ವಿಭಾಗಿಸಿರುವರು. ಮುಖ್ಯ ಪಟ್ಟಣವು ಆಮಸ್ಟರ್ಡಮ್. ಆದರೆ ಹೇಗ ಪಟ್ಟಣವೆಂದರೆ ಸರಕಾರದ ಮತ್ತು ಪಾರ್ಲಿಮೆಂಟಿನ ಮುಖ್ಯಸ್ಥಾನವು. ರಾಟರ್‌ಡಮ್ ಮತ್ತು ಆಮಸ್ಟರ್ಡಮ್ ಇವೆರಡು ಸಮುದ್ರದ ದೊಡ್ಡ ಬಂದರಗಳು. ಪಾರ್ಲಿಮೆಂಟಿನ ತತ್ವಗಳ ತಳಹದಿಯ ಮೇಲೆ ರಚಿತವಾದ ಘಟನಾತ್ಮಕವಾದ ಅರಸುತನವು ದೇಶದ ಆಡಳಿತೆಯನ್ನು ನೋಡಿಕೊಳ್ಳು ವದು. ಸರಕಾರವೆಂದರೆ ಪಾರ್ಲಿಮೆಂಟಿನ ಬಹುಮತದಿಂದ ರಚಿತವಾದದ್ದು. ಅರಸನೂ ( ಅರಸಿಯೂ ) ಪಾರ್ಲಿಮೆಂಟೂ ಕೂಡಿಯೇ ಅಮಲಿನಲ್ಲಿ ತರ ಬೇಕಾದ ಅಧಿಕಾರಗಳನ್ನು ನಡೆಯಿಸಿಕೊಂಡು ಹೋಗುವರು. ಪಾರ್ಲಿ ಮೆಂಟಿನಲ್ಲಿ ಎರಡು ಮನೆಗಳು ಇರುವವು. ಮಹಾರಾಣಿಯಾದ ಜ್ಯುಲಿ ಯಾನಾ ಅವಳೇ ದೇಶದ ಸದ್ಯದ ಘಟನಾತ್ಮಕ ಅಧಿದೇವತೆಯು.

## ಸೇನಾಬಲ ಸಹಾಯ

ಯುರೋಪಖಂಡದಲ್ಲಿ ಸೇನೆಯ ಸಹಾಯವನ್ನು ಪಡೆದ ದೇಶಗಳಲ್ಲಿ ನೆದರ್ಲಂಡೂ ಒಂದು. ಸೇನೆಯ ಎಲ್ಲ ಬಗೆಯ ಸೌಕರ್ಯ ಸೌಲಭ್ಯಗಳು ಈ ದೇಶಕ್ಕೆ ಪೂರ್ಣವಾಗಿ ದೊರೆತಿವೆ, ಮತ್ತು ಆದಷ್ಟು ಬೇಗ ಈ ದೇಶವು ತನ್ನ ಕಾಲುಗಳ ಮೇಲೆ ತಾನು ನಿಲ್ಲಲಿಕ್ಕೆ ಯತ್ನಿಸುತ್ತಿದೆ.

## ಸಾರಿಗೆಯ (ವಾಹನಗಳ) ವ್ಯವಸ್ಥೆ

ರೇಲ್ವೆ ಮತ್ತು ಮಾರ್ಗಗಳು ಸುವ್ಯವಸ್ಥಿತವಾಗಿ ವಿಕಾಸ ಹೊಂದಿವೆ, ಕಾಲುವೆಗಳ ಮತ್ತು ನೀರ ಹರಿಗಳ ಪದ್ಧತಿಯೂ ಉತ್ತಮವಾಗಿದೆ. ಬಹು ತರವಾಗಿ ಎಲ್ಲ ಹಳ್ಳಿಗಳು ಉತ್ತಮವಾದ ಉಗಿಬಂಡಿಯ ದಾರಿಗಳ, ಮಾರ್ಗ ಗಳ ಮತ್ತು ಕಾಲುವೆಗಳ ಸಂಗಡ ಸಂಬಂಧವನ್ನು ಬೆಳೆಯಿಸಿವೆ. ಇಲ್ಲಿ ಸಾರಿಗೆಯ ಅಥವಾ ವಾಹನಗಳ ವ್ಯವಸ್ಥೆಯು ಉನ್ನತವಾದ ಉತ್ತಮ ವಾದ ರೀತಿಯಲ್ಲಿ ವಿಕಾಸಗೊಂಡಿರುವದೇ ದೇಶದ ಅಭಿವೃದ್ಧಿಯ ಅನೇಕ ಕಾರಣಗಳಲ್ಲಿ ಒಂದಾಗಿದೆ.

೧೩೬೦೦ ಚೌರಸ ಮೈಲುಗಳ ವರೆಗೆ ವಿಸ್ತಾರವಾಗಿರುವ ಈ ದೇಶದಲ್ಲಿ ೬೬೭೦ ಮೈಲುಗಳ ವರೆಗೆ ಹಾದಿಗಳೂ, ೨೦೮೦ ಮೈಲುಗಳವರೆಗೆ ಉಗಿ

ಬಂಡಿ ಮಾರ್ಗಗಳೂ, ಮತ್ತು ಸಾವಿರಾರು ಸೇತುವೆಗಳೂ ಹೆಣೆದುಕೊಂಡಿವೆ. ಜಗತ್ತಿನಲ್ಲಿಯೇ ಅತಿ ಹಳೆಯದಾದ ಆಕಾಶಯಾನದ (ಏರ ಲಾಯಿನ್) ತವರು ಮನೆಯೆಂದರೆ ನೆದರ್ಲಂಡು. ಕೇ. ಎಲ್. ಎಂ. ಎಂಬುದು ಜಗತ್ತಿನಲ್ಲಿಯೇ ಒಂದು ಉತ್ತಮವಾದ ಆಕಾಶಯಾನವು.

ಆಮಸ್ಟರ್ಡಮ್ ಮತ್ತು ರಾಟರ್‌ಡ್ಯಾಮ ಬಂದರಗಳಿಂದ ಜಗತ್ತಿನಲ್ಲಿಯ ಎಲ್ಲ ಸಮುದ್ರಗಳ ಮೇಲೆ ಸಂಚರಿಸುವ ಒಂದು ದೊಡ್ಡ ನೌಕಾ ಬಲವಿರುವದು.

ನೆದರ್ಲಂಡು, ಚಿಕ್ಕದಾಗಿ ಕಂಡರೂ, ನೋಡಲಿಕ್ಕೆ ಯೋಗ್ಯವಾದ ದೇಶವು. ಒಕ್ಕಲುತನವೂ, ಒಕ್ಕಲುತನದ ಸಹಕಾರಿ ಸಂಘಗಳೂ ಸಾಕಷ್ಟು ಅಭಿವೃದ್ಧಿ ಹೊಂದಿವೆ. ಉತ್ಪಾದನೆಯ ಮತ್ತು ಮಾರಾಟದ ಕೀಲಗಳೆರಡೂ ಸಹಕಾರಿ ಸಂಘಗಳ ಮುಖಾಂತರ ಒಕ್ಕಲಿಗರ ಕೈಯಲ್ಲಿಯೇ ಉಳಿದಿವೆ. ಇಲ್ಲಿಯ ಜನರು ಒಳ್ಳೆಯವರೂ ಸಹಾಯಕರೂ ಮತ್ತು ಅತಿಥಿಸತ್ಕಾರದಲ್ಲಿ ಹೆಸರಾದವರೂ ಇರುವರು.

ಶ್ರೀಮಂತ ಮತ್ತು ಬಡವರ ಉತ್ಪನ್ನದ ನಡುವಿನ ನಿರಾಶಾದಾಯಕ ಅಂತರವನ್ನು ತೊಡೆದು ಹಾಕಲಿಕ್ಕೆ ಸರಕಾರದವರು ಅಗತ್ಯವಿರುವ ಯೋಜನೆಗಳನ್ನು ಕೈಕೊಂಡಿದ್ದಾರೆ.

# ೨ ನೆದರ್ಲಾಂಡಿನಲ್ಲಿ ಸಹಕಾರವು



ಸುಮಾರು ಎಪ್ಪತ್ತು ವರ್ಷಗಳ ಮೊದಲು, ಇಂದಿನ ನಮ್ಮ ಭಾರತದ ಒಕ್ಕಲಿಗನ ಪರಿಸ್ಥಿತಿಗೂ, ಅಂದಿನ ಡಚ್ಚ ಒಕ್ಕಲಿಗನ ಪರಿಸ್ಥಿತಿಗೂ ಏನೂ ಅಂತರವಿರಲಿಲ್ಲ. ಪ್ರತಿಯೊಬ್ಬನು ಧಾರಣಮಾಡಿದ ಜಮೀನುಗಳು ಸಣ್ಣ ಸಣ್ಣ ತುಂಡುಗಳಾಗಿದ್ದವು. ಹೊಲಗಳ ಹುಟ್ಟುವಳಿಯೂ ತೀರ ಕಡಿಮೆಯ ಪ್ರಮಾಣವಲ್ಲಿದ್ದಿತು. ಭೂಮಿಯ ಫಲವತ್ತೆಯೂ ನಿಕೃಷ್ಟವಾಗಿದ್ದಿತು. ಕುಳಗಳ ಪರಿಸ್ಥಿತಿಯು ಹೊಯ್ದಾಡುತ್ತಿದ್ದಿತು. ರೈತನು ಆಳವಾದ ಸಾಲದ ಮಡುವಿನಲ್ಲಿ ಮುಳುಗಿ ಬಿಟ್ಟಿದ್ದನು. ಅವನ ಒಕ್ಕಲುತನದ ಪದ್ಧತಿಯೋ ತೀರ ಬಾದರಾಯಣಕಾಲದ್ದು. ಬಹಳ ಹಳೆಯದು ವ್ಯವಹಾರದಲ್ಲಿ, ಅವನು ನಡುವಿನ ದಲಾಲರ ಸುಲಿಗೆಗೀಡಾಗಿ ನರಳುತ್ತಿದ್ದನು. ತನ್ನ ಶತ್ರು ಸ್ವರೂಪದಲ್ಲಿದ್ದ ಎಜನ್ಸಿಗಳ ಮುಖಾಂತರ ತನ್ನ ಹುಟ್ಟುವಳಿಯನ್ನು ಮಾರಿ ಜೀವನಾವಶ್ಯಕವಾದ ಪದಾರ್ಥಗಳನ್ನು ಕೊಂಡುಕೊಳ್ಳಬೇಕಾಗಿದ್ದಿತು. ಅವನಲ್ಲಿ ಸಂಘಟನೆಯ ಭಾವನೆಯಾಗಲೀ ಶಕ್ತಿಯಾಗಲೀ ಉಳಿದಿರಲಿಲ್ಲ. ಉದ್ಯೋಗಗಳೂ ಕುಂಠಿತವಾಗಿದ್ದವು. ಒಬ್ಬನೇ ಒಬ್ಬನಾಗಿ, ತನ್ನನ್ನು ಸುತ್ತಿ ಮುತ್ತಿದ ವ್ಯಾಪಾರಿ ಪ್ರವೃತ್ತಿಯ ಎಜನ್ಸಿಗಳ ದಾಳಿಯನ್ನು ಎದುರಿಸಿ ಅವುಗಳ ಸುಲಿಗೆಯನ್ನು ತಡೆಯಲಾರದ, ತೊಡೆಯಲಾರದ ಸ್ಥಿತಿಗಿಳಿದಿದ್ದನು. ಅವನ ಪ್ರತಿಯೊಂದು ವ್ಯವಹಾರದಲ್ಲಿಯೂ ಆರ್ಥಿಕ ಅನಾನುಕೂಲತೆಯು ಆವನ ಬೆನ್ನು ಹತ್ತಿದ್ದಿತು. ತನ್ನ ಹುಟ್ಟುವಳಿಯನ್ನು ಎಷ್ಟೋ ಸಲ ತೀರ ಕಡಿಮೆಯ ದರಕ್ಕೆ ಮಾರುವ ಪ್ರಸಂಗ ಬರುತ್ತಿದ್ದಿತು. ಒಮ್ಮೊಮ್ಮೆಯಂತೂ, ಅವನ ಹುಟ್ಟುವಳಿಗೆ ತಗಲಿದ ಮೂಲ ಹಣಕ್ಕಿಂತಲೂ ತೀರ ಕಡಿಮೆ ಬೆಲೆಯು ಆವನ ಕೈಸೇರುತ್ತಿದ್ದಿತು. ಏರಿಕೆಯ ಧಾರಣೆಯು ಬರುವ ವರೆಗೆ ತನ್ನ ಹುಟ್ಟುವಳಿಯನ್ನು ಕಾಯ್ದಿಟ್ಟುಕೊಳ್ಳುವ ಪರಿಸ್ಥಿತಿಯೂ ಅವನಲ್ಲಿರಲಿಲ್ಲ. ಆದುದರಿಂದ ದಲಾಲರು ಹೇಳಿದ ಬೆಲೆಗನೇ ತನ್ನ ಹುಟ್ಟುವಳಿಯನ್ನು ಅವನು ಅನಿವಾರ್ಯವಾಗಿ ಮಾರಬೇಕಾಗುತ್ತಿ

ದ್ದಿತು. ತನ್ನ ನಿಯಂತ್ರಣ ಶಕ್ತಿಯು ಅಡಗಿರುವ ಕಾರಣಗಳಿಂದುಂಟಾದ ಆರ್ಥಿಕ ದುರವಸ್ಥೆಯ ಮೂಲಕ, ಈ ಸಂಕಟಗಳಿಂದ ಪಾರಾಗುವ ಹಾದಿಯನ್ನು ಹುಡುಕಲು ಯೋಚಿಸತೊಡಗಿದನು. ಆರ್ಥಿಕ ದುರವಸ್ಥೆಗೂ ಸಾಮಾಜಿಕ ವಿಷಮತೆಗೂ ಪರಿಹಾರವು ಅವನಿಗೆ ಸಹಕಾರದಲ್ಲಿ ಗೋಚರಿಸಿತು. ಎಪ್ಪತ್ತು ವರ್ಷಗಳಿಗಿಂತಲೂ ತುಸು ಮೊದಲೇ ಪ್ರಾರಂಭವಾದ ಸಹಕಾರ ಚಳವಳಿಯು ಮುಖಾಂತರ ಅವನಿಗೆ ನೆರವೂ ವಿಶ್ರಾಂತಿಯೂ ಶಾಂತಿಯೂ ದೊರೆತವು. ದನಗಳ ಜೇನೆ, ಅಗ್ನಿಭಯ, ಹಿಮಪಾತಗಳ ಹಾನಿಯ ಭರತಿಗಾಗಿ, ಅಥವಾ ಅವುಗಳ ನಿವಾರಣೆಗಾಗಿ ಪರಸ್ಪರ ವಿಮೆ ಇಳಿಸುವ, ಸಾಲ ತರುವ, ಕೊಳ್ಳುವ, ಮಾಲನ್ನು ತಯಾರಿಸುವ, ಪೇಟೆಯಲ್ಲಿ ಯೋಗ್ಯದರದಿಂದ ಮಾರುವ ಸಂಘಟಿತ ಪ್ರಯತ್ನಗಳ ಮೂಲಕ ಒಕ್ಕಲಿಗನ ಆರ್ಥಿಕ ದುರವಸ್ಥೆಯನ್ನು ನಿವಾರಿಸಿ, ಅವನ ಪರಿಸ್ಥಿತಿಯನ್ನು ಬಲಪಡಿಸುವ ಅವಶ್ಯಕತೆಯೊಂದರಿಂದಲೇ ಸಹಕಾರೋದಯವಾಯಿತು. ಆರ್ಥಿಕ ವಿಷಮತೆಗೀಡಾಗಿ, ದಲಾಲರ ಸುಲಿಗೆಗೆ ಪಕ್ಕಾಗಿ, ನಿಸ್ಸಹಾಯಕನಾಗಿ, ನಿರ್ಬಲನಾಗಿ, ಸಮಾಜದ ಆರ್ಥಿಕ ಹಿತಸಂಬಂಧಗಳಲ್ಲಿ, ಶಕ್ತಿಗಳಲ್ಲಿ ಉಂಟಾಗುವ ಆಘಾತ ಪ್ರತ್ಯಾಘಾತಗಳನ್ನು ತಡೆಯಲಾರದೆ ಅವನು ( ಒಕ್ಕಲಿಗನು ) ಯೋಚಿಸಿಯೇ ಯೋಚಿಸಿದನು. ಕೊನೆಗೊಮ್ಮೆ ತನ್ನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ಕೊಳ್ಳಬೇಕಾದರೆ, ತನ್ನ ಸಾಮಾಜಿಕ ಪರಿಸ್ಥಿತಿಯಿಂದ ಮೇಲಕ್ಕೇಳಬೇಕಾದರೆ, ಮಿತವ್ಯಯ. ಸ್ವಾವಲಂಬನೆ ಪರಸ್ಪರ ಸಹಾಯಗಳ ತತ್ವಗಳ ಆಧಾರದ ಮೇಲೆ ಸಂಘಟಿತವಾಗುವಲ್ಲಿಯೇ ಅವನಿಗೆ ಬೆಳಕು ಕಂಡಿತು. ಸಹಕಾರದ ದರ್ಶನವಾಯಿತು.

ಒಕ್ಕಲಿಗರ ಸ್ವಸಂರಕ್ಷಣೆಯ ಸಾಧನವೆಂದು ಇಲ್ಲಿ ಸಹಕಾರ ಚಳವಳಿಯು ಆರಂಭವಾಯಿತು. ಅದು ಆರ್ಥಿಕ ಅವಶ್ಯಕತೆಯೆಂದೂ ಪ್ರಚಾರದಲ್ಲಿ ಬಂದಿತು. ಈ ದೇಶದಲ್ಲಿ ಒಕ್ಕಲಿಗರಲ್ಲಿ ಆರಂಭವಾದ ಈ ಚಳವಳಿಯು ಪ್ರಮುಖವಾಗಿ ಒಕ್ಕಲಿಗರ ಚಳವಳಿಯಾಗಿಯೇ ಉಳಿಯಿತು. ಆದರೆ ಗ್ರೇಟ್ ಬ್ರಿಟನ್ನಿನಲ್ಲಿ ಈ ಚಳವಳಿಯ ಪರಿಸ್ಥಿತಿಯು ಇದಕ್ಕೆ ವಿಪರೀತವಾಗಿದ್ದಿತು. ಒಕ್ಕಲಿಗರ ಉತ್ಪಾದಕರ ಚಳವಳಿಯೆಂದು ಇಲ್ಲಿ ಆರಂಭವಾಗಿ ವಿಕಾಸಗೊಂಡಿತು. ಒಕ್ಕಲುತನದ ಸಹಕಾರದಲ್ಲಿ ಈ ಚಳವಳಿಯು ಬೇರು

ಜಟ್ಟ್ಸಿ ರಭಸಗತಿಯಿಂದ ಕೊನರ ತೊಡಗಿತು. ದಿಕ್ಕು ದಿಕ್ಕುಗಳಲ್ಲಿ ವಿಶಾಲವಾಗಿ ಸಂಪನ್ನವಾಗಿ ಹರಡತೊಡಗಿತು. ತೀರ ಸಣ್ಣ ಪ್ರಮಾಣದಲ್ಲಿ ಆರಂಭವಾದ ಈ ಚಳವಳಿಯು ಒಕ್ಕಲುತನದ ಮತ್ತು ಒಕ್ಕಲುತನದ ಉದ್ಯೋಗಗಳ ಪ್ರತಿಯೊಂದು ಶಾಖೆಯನ್ನು ಆವರಿಸಿ ತೀವ್ರಗತಿಯಿಂದ ಪಸರಿಸತೊಡಗಿತು. ಇಂದಿದು ದೇಶದಲ್ಲಿ ಸರ್ವವ್ಯಾಪಿಯಾದ ಸರ್ವಶಕ್ತವಾದ ಚಳವಳಿಯಾಗಿ ತಲೆಯೆತ್ತಿದೆ. ದೇಶದ ಒಂದು ಕೋಟಿ ಜನಸಂಖ್ಯೆಯಲ್ಲಿ ಒಂದು ಐದಾಂಶ ಭಾಗವಾದ ಒಕ್ಕಲಿಗರ ಎಲ್ಲ ಬಗೆಯ ಅಡಚಣೆಗಳನ್ನು ನಿವಾರಿಸಲು ಸದ್ಯಕ್ಕೆ ಸುಮಾರು ಐದು ಸಾವಿರ ಸಹಕಾರಿ ಸಂಘಗಳಿವೆ. ಈ ಎಲ್ಲ ಸಂಘಗಳ ಸದಸ್ಯರ ಸಂಖ್ಯೆಯು ಆರು ಲಕ್ಷಕ್ಕೇರಿದೆ.

ಬಂಡವಾಳಶಾಹಿಯ ಸಂಸ್ಥೆಗಳು ಕೈಕೊಳ್ಳಬಹುದಾದ ಎಲ್ಲ ಬಗೆಯ ಚಟುವಟಿಕೆಗಳನ್ನು, ಡಚ್ಚ ಒಕ್ಕಲಿಗನು ಸಹಕಾರಿ ಸಂಘಗಳಲ್ಲಿ ಪ್ರವೇಶಿಸಿ, ಅವುಗಳ ಮುಖಾಂತರ ನಿರ್ವಹಿಸಿಕೊಂಡು ಹೋಗುವನು. ತನ್ನ ಬೆಣ್ಣೆ ಗಿಣ್ಣಗಳನ್ನು ತಾನೇ ತಯಾರಿಸುವನು. ತನ್ನ ಹಂದಿ ದನಕರುಗಳನ್ನು ಪ್ರಸಂಗಬಿದ್ದರೆ ತಾನೇ ಕೊಲ್ಲುವನು, ತಾನೇ ಮಾರುವನು. ತನ್ನ ಎಲ್ಲ ತತ್ತಿಗಳನ್ನು ತಾನೇ ಕಲೆ ಹಾಕಿ ಪೇಟೆಯಲ್ಲಿ ತಾನೇ ಮಾರುವನು. ತನ್ನ ಕಾಯಿಪಲ್ಯೆ, ಹೂ, ಹಣ್ಣು-ಹಂಪಲಗಳನ್ನು ಸಹ ತಾನೇ ವಿಕ್ರಯಿಸುವನು. ಕಚ್ಚಾಮಾಲಿನಿಂದ ಪಕ್ಕಾಮಾಲನ್ನು ತಯಾರಿಸಿ, ಪರದೇಶಗಳಿಗೆ ಮಾರಾಟಕ್ಕೆ ತಾನೇ ಕಳಿಸುವನು. ತನಗೆ ಅವಶ್ಯಕವಾದ ಪದಾರ್ಥಗಳು ದೂರ ದೂರದ ಪೇಟೆಗಳಿಂದ ತಾನೇ ತರಿಸುವನು ತಾನೇ ಕೊಳ್ಳುವನು. ಬ್ಯಾಂಕಿನ ವ್ಯವಹಾರವನ್ನು ತಾನೇ ಮಾಡುವನು. ತನ್ನ ಪತ್ತನ್ನು ತಾನೇ ಪ್ರಸ್ಥಾಪಿಸುವನು. ಅನುವು ಆಪತ್ತು ಸಂಕಟಗಳ ಪರಿಹಾರಕ್ಕಾಗಿ ತನ್ನ ಮನೆಯ, ತನ್ನ ದನಕರುಗಳ ವಿಮೆಯನ್ನು ತಾನೇ ಇಳಿಸುವನು. ತನ್ನ ದನಗಳ ಪೀಳಿಗೆಯನ್ನು ತಾನೇ ಸುಧಾರಿಸಲು ಯತ್ನಿಸುವನು. ಠೋಕ ದರದಿಂದ ತನ್ನ ಆವಶ್ಯಕತೆಗಳನ್ನು ಕೊಂಡು ಚಿಲ್ಲರೆ ದರದಿಂದ ತನಗೆ ತಾನೇ ಮಾರಿಕೊಳ್ಳುವನು. ಪ್ರತಿಯೊಂದು ಹಳ್ಳಿಯಲ್ಲಿಯೂ ವಿಶಿಷ್ಟವಾದ ಪ್ರಾಥಮಿಕ ಸಹಕಾರಿ ಸಂಘಗಳಿವೆ. ವೈಯಕ್ತಿಕವಾಗಿ ಕೆಲವೊಂದು ಪ್ರಕಾರದ ವ್ಯವಹಾರವನ್ನು ಮಾಡಲಾರದ, ನಿರ್ವಹಿಸಿಕೊಂಡು ಹೋಗಲಾರದ ಈ ಪ್ರಾಥಮಿಕ ಸಂಘಗಳು, ಗುಂಪುಗೊಂಡು ದೊಡ್ಡ ದೊಡ್ಡ ಸಂಸ್ಥೆಗ

ಳಾಗಿ ಪರಿಣಮಿಸಿರುವವು. ಸಂಘಗಳೂ ಕೂಡ ಪ್ರಾದೇಶಿಕ ಅಥವಾ ಪ್ರಾಂತಿಕ ಮತ್ತು ರಾಷ್ಟ್ರದ ಮಟ್ಟದಲ್ಲಿರುವ ಕೇಂದ್ರ ಸಂಯುಕ್ತ ಸಂಸ್ಥೆಗಳಿಗೆ ಸಮಾವೇಶವಾಗಿ ಸಂಬಂಧವನ್ನಿಟ್ಟುಕೊಳ್ಳುವವು. ಸಹಕಾರಿ ಸಂಘಗಳನ್ನು ಸಂಯೋಜಿಸಿ ದೊಡ್ಡ ದೊಡ್ಡ ಸಂಸ್ಥೆಗಳನ್ನಾಗಿ ಮಾಡಿರುವದರಿಂದ ಸ್ಪರ್ಧಾಸಂಸ್ಥೆಗಳ ಪೈಪೋಟಿಗೆ ಎದೆಗೊಟ್ಟು ತಡೆಯಲಿಕ್ಕೂ ತಮ್ಮ ಚಟುವಟಿಕೆಗಳನ್ನು ಹಿತ ಮಿತವಾಗಿ ಸರಿಯಾಗಿ, ಸಾಮರ್ಥ್ಯ ಪೂರ್ಣವಾಗಿ ನಡೆಯಿಸಿಕೊಂಡು ಹೋಗಲಿಕ್ಕೂ ಅನುಕೂಲವಾಗಿವೆ. ಸಂಯುಕ್ತ ಸಂಸ್ಥೆಗಳಿಂದ ರಾಷ್ಟ್ರದ ಸಂಸ್ಥೆಗಳಿಂದ ಸಂರಕ್ಷಿಸಲ್ಪಡದ, ಸುರಕ್ಷಿತತೆಯ ಭರವಸೆಯನ್ನು ಪಡೆಯದ, ಉತ್ಕರ್ಷದ ಮಾರ್ಗದರ್ಶನದಿಂದ ಅಂತರಿಸಿದ, ಒಂಟಿಯಾಗಿ, ಸ್ವತಂತ್ರವಾಗಿ ನಿಂತು ವ್ಯವಹಾರವನ್ನು ಮಾಡುವ ಒಂದೂ ಸಹಕಾರ ಸಂಸ್ಥೆಯು ಈ ದೇಶದಲ್ಲಿಲ್ಲ. ನೆದರ್ಲಂಡಿನ ಸಹಕಾರದ ಪ್ರಮುಖ ವೈಶಿಷ್ಟ್ಯಗಳಿವು.

## (೧) ಸ್ವಯಂಪ್ರೇರಿತ ಬೆಳವಣಿಗೆ ಸ್ವಸಂತೋಷದ ಸದಸ್ಯತ್ವ.

ಇಲ್ಲಿಯ ಸಹಕಾರಾಂದೋಲನವು ಪೂರ್ಣವಾಗಿ ಸ್ವಯಂಪ್ರೇರಿತವಾದದ್ದು. ಸ್ವೇಚ್ಛೆಯಲ್ಲಿ ಹರಿದು ಬಂದದ್ದು. ಅದು ಸರಕಾರದಿಂದ ಪಡೆಯುವ ಸಹಾಯ ಸವಲತ್ತುಗಳೋ ಅತ್ಯಲ್ಪ. ಅಲ್ಲದೆ ಸರಕಾರದ ಯಾವದೇ ಬಗೆಯ ನಿಯಮ-ನಿಯಂತ್ರಣಕ್ಕೂ ಒಳಪಟ್ಟಿಲ್ಲ. ಒಕ್ಕಲಿಗನಿಗೆ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಬೇಕೆಂದಾಗ, ಅಥವಾ ಕೆಲವೊಂದು ಚಟುವಟಿಕೆಗಳನ್ನು ಕೈಕೊಳ್ಳಬೇಕೆಂದೆನಿಸಿದಾಗ ನಾನಾ ಪ್ರಕಾರದ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿ ಬರುವವು. ಮತ್ತು ಒಂದರಿಂದಿನ್ನೊಂದು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಿಕೊಂಡು ಹೋಗುವವು. ಸಹಕಾರ ಚಳವಳಿಯ ಪ್ರಗತಿಯನ್ನು ಸುವ್ಯವಸ್ಥಿತರೀತಿಯಿಂದ ಸಾಧಿಸುವದೃಷ್ಟಿಯಿಂದ ಮೊದಲೇ ಯಾವದೇ ಬಗೆಯ ಯೋಜನೆಯ ರೂಪರೇಷೆಗಳನ್ನು ಹಾಕಿರುವದಿಲ್ಲ. ಬೇರೆ ಬೇರೆ ಪ್ರಕಾರದ ಸಹಕಾರಿ ಸಂಘಗಳ ಸಂಘಟನೆಗೆ ಅಡಚಣೆ ಅಥವಾ ಅವಶ್ಯಕತೆಯೊಂದೇ ಮುಖ್ಯವಾದ ಕಾರಣವಾಗಿದೆ. ಸ್ವಯಂಪ್ರೇರಿತ ಸದಸ್ಯತ್ವವು ಸಹಕಾರದ ಮೂಲ ಭೂತ ತತ್ವವಾಗಿದೆ. ವೈಯಕ್ತಿಕ ಒಕ್ಕಲಿಗರೂ

ಬೆಳೆಗಾರರೂ ಸ್ಥಾನಿಕ ಸಹಕಾರಿ ಸಂಘಗಳಲ್ಲಿ ಸೇರಲೇಬೇಕೆಂಬ ನಿರ್ಬಂಧ ವಿಲ್ಲ. ಅದರಂತೆಯೇ ಸ್ಥಾನಿಕ ಸಹಕಾರಿ ಸಂಘಸಂಸ್ಥೆಗಳು ಸಂಯುಕ್ತ ಸಂಘಗಳಿಗೆ ಸಮಾವೇಶವಾಗಲೇಬೇಕೆಂಬ ನಿಯಮವೂ ಇಲ್ಲ. ಕೆಲ ವೊಂದು ಹಳ್ಳಿಗಳಲ್ಲಿಯ ಸ್ಥಾನಿಕ ಸಹಕಾರಿ ಸಂಘಗಳ ಸದಸ್ಯರಾಗದೇ ಧಾರ್ಮಿಕ ಮತ್ತು ಇತರ ತತ್ವಗಳ ತಳಹದಿಯ ಮೇಲೆ ರಚಿತವಾದ ಸಹ-ಕಾರಿ ಸಂಘಗಳ ಸಭಾಸದರಾಗುವ ಕೆಲವೊಂದು ಜನರೂ ಇರುವರು. ಒಂದು ಹಳ್ಳಿಯಲ್ಲಿ ಎರಡು ಪತ್ತಿನ ಸಂಘಗಳಿವೆ, ಒಂದು ರೋಮನ್ ಕ್ಯಾಥೋಲಿಕ್ ಜನರ ಸಲುವಾಗಿ; ಇನ್ನೊಂದು ಬಿನ್ ರೋಮನ್ ಕ್ಯಾಥೋಲಿಕ್ ಜನರ ಸಲುವಾಗಿ ಮೊದಲನೆಯ ಸಂಘವು ಐಂಡೋವ್ಹ ನ್ನಿನಲ್ಲಿ ಪ್ರಮುಖವಾಗಿ ರೋಮನ್ ಕ್ಯಾಥೋಲಿಕ್ ಜನರಿಂದ ನಡೆಯಿಸ ಲ್ಪಡುತ್ತಿರುವ ಕೇಂದ್ರ ಬ್ಯಾಂಕಿನ ಸದಸ್ಯತ್ವವನ್ನು ವಹಿಸಿದ್ದರೆ, ಎರಡನೆ ಯದು ಯುಟ್ರೆಚಿಟ್ಟನಲ್ಲಿಯ ಕೇಂದ್ರ ಸಾಲ ಪೂರೈಸುವ ಸಂಸ್ಥೆಯ ಸಭಾ-ಸದತ್ವವನ್ನು ವಹಿಸಿರುವದು. ಸಂಯುಕ್ತ ( ಫೆಡರಲ್ ) ಸಂಸ್ಥೆಗಳ ಸಭಾ-ಸದತ್ವವನ್ನು ವಹಿಸದೇ ಇರುವ ಕೆಲವೊಂದು ಸಂಘಗಳೂ ಉಂಟು. ಸ್ಥಾನಿಕ ಸಹಕಾರಿ ಸಂಸ್ಥೆಗಳಿಂದ ಸಂಘಟಿತವಾದ ಯಾವದೇ ಕೇಂದ್ರ ಸಂಸ್ಥೆಯು, ತನ್ನ ಸಭಾಸದತ್ವವನ್ನು ವಹಿಸದ ಯಾವದೇ ಸ್ಥಾನಿಕ ಸಂಸ್ಥೆಯ ಮೇಲೆ ತನ್ನ ವರ್ಚಸ್ಸನ್ನು ಹೇರಲಾರದು.

## ಸರಕಾರದ ಕಾಯದೆಯಿಂದ ಮುಕ್ತತೆ.

ಸಹಕಾರದ ಚಳವಳಿಯ ಪ್ರಗತಿಗಾಗಿ ಸರಕಾರವು ಯಾವದೇ ಬಗೆಯ ಆಸ್ಥೆ-ಧೋರಣೆಗಳನ್ನು ಎಂದೂ ವಹಿಸಿರುವದಿಲ್ಲ. ಈ ಚಳವ ಳಿಯ ವಿಕಾಸಕ್ಕಾಗಿ ಸ್ಥಾನಿಕ ಅಥವಾ ರಾಷ್ಟ್ರದ ಯಾವದೇ ಬಗೆಯ ಅಧಿ-ಕಾರಗಳು ತಮ್ಮ ವರ್ಚಸ್ಸನ್ನು ಉಪಯೋಗಿಸಿಲ್ಲ. ನಮ್ಮ ದೇಶದಲ್ಲಿಯ ಸಹಕಾರಿ ಸಂಘಗಳಿಗೆ ದೊರೆತಿರುವ ವಿಶೇಷ ಸವಲತ್ತು, ಹಕ್ಕು ಬಾಧ್ಯತೆ ಮೊದಲಾದವುಗಳು ಅಲ್ಲಿಯ ಸಂಘಗಳಿಗಿಲ್ಲ. ಸಹಕಾರ ಚಳವಳಿಯ ಪಕ್ಷ-ವನ್ನು ವಹಿಸಿ ಯಾವದೇ ರಾಜಕೀಯ ಪಕ್ಷ ಪಂಗಡಗಳು ತಮ್ಮ ಮತ ಪ್ರದರ್ಶನವನ್ನು ಮಾಡಲಿಚ್ಛಿಸುವದಿಲ್ಲ. ಗ್ರೇಟ ಬ್ರಿಟನ್ನಿನಲ್ಲಿರುವಂತೆ ಇಲ್ಲಿ ರಾಜಕೀಯ ಕ್ಷೇತ್ರದಲ್ಲಿ ಯಾವದೇ ಬಗೆಯ ಸಹಕಾರಿಗಳ ಪಕ್ಷ ಪಂಗಡ ಗಳಿರುವದಿಲ್ಲ.

— ಶ್ರೀ —

## ವಿಶಿಷ್ಟ ಉದ್ದೇಶಕ್ಕಾಗಿ ಸಂಘಟಿತವಾದ ಸಂಸ್ಥೆಗಳು.

ಸರ್ವಸಾಧಾರಣವಾಗಿ ಸಹಕಾರಿ ಸಂಘಗಳು ವಿಶಿಷ್ಟ ಉದ್ದೇಶವನ್ನು ಪೂರೈಸಲಿಕ್ಕೆ ಅನುಕೂಲವಾದ ಕಾರ್ಯವನ್ನು ಕೈಕೊಳ್ಳುವವು. ಅನೇಕ ಸ್ಥಳಗಳಲ್ಲಿಯ ಒಕ್ಕಲಿಗರ ಬೇರೆ ಬೇರೆ ಪ್ರಕಾರದ ಆವಶ್ಯಕತೆಗಳನ್ನು ಪೂರೈಸುವ ಉದ್ದೇಶವುಳ್ಳ ಸುಮಾರು ಐದಾರು ಸಂಘಗಳು ಒಂದೇ ಹಳ್ಳಿಯಲ್ಲಿರುವವು. ಒಂದು ಸಂಘವು ಹಾಲು ಹೈನದ ಏರ್ಪಾಟನ್ನು ಮಾಡಿದರೆ, ಇನ್ನೊಂದು ಒಕ್ಕಲಿಗರಿಗೆ ಆವಶ್ಯಕವಾದ ಆಹಾರ ಧಾನ್ಯ, ಮೇವು, ಸುಪೀಕತೆಯ ಸಾಧನೆ, ಯಾಂತ್ರಿಕ ಉಪಕರಣ ಮೊದಲಾದವುಗಳ ಪೂರೈಕೆಯ ವ್ಯವಸ್ಥೆಯನ್ನು ಮಾಡುವದು. ಮೂರನೆಯ ಸಂಘವು ಒಕ್ಕಲಿಗರಿಗೆ ಸಾಲದ ಪೂರೈಕೆಯ ಅನುಕೂಲತೆಯನ್ನು ಕಲ್ಪಿಸಿಕೊಡುವದು. ನಾಲ್ಕನೆಯ ಸಂಘವು ಹಣ್ಣು-ಹಂಪಲ, ಕಾಯಿಪಲ್ಯೆ, ಬಣ್ಣ ಬಣ್ಣದ ಹೂವು ಮೊದಲಾದವುಗಳನ್ನು ಮಾರುತ್ತದೆ. ಐದನೆಯದು ತತ್ತಿಗಳನ್ನು ಕಲೆಹಾಕುತ್ತದೆ. ಆರನೆಯದು ದನಗಳ ಸಂಗೋಪನೆಯ ಕಡೆಗೆ ತನ್ನ ಗುರಿಯನ್ನಿಟ್ಟಿರುವದು. ಹಾಲು ಹೈನದ ವ್ಯವಹಾರವನ್ನೂ, ಒಕ್ಕಲಿಗನ ಆವಶ್ಯಕತೆಗಳನ್ನು ಪೂರೈಸುವ ವ್ಯವಹಾರವನ್ನೂ ಮೇಳಗೂಡಿಸಿಕೊಂಡು ಕಾರ್ಯ ನಿರ್ವಹಿಸಿಕೊಂಡು ಹೋಗುವ ಸಹಕಾರಿ ಸಂಘಗಳ ಉದಾಹರಣೆಗಳು ಕ್ವಚಿತ್ತಾಗಿ ದೊರೆಯುತ್ತವೆ.

## ಒಬ್ಬ ವ್ಯಕ್ತಿಗೆ ಒಂದು ಮತ.

ಒಬ್ಬ ವ್ಯಕ್ತಿಯು ಯಾವದೇ ಬಗೆಯ ಸಹಕಾರಿ ಸಂಘಗಳ ಸದಸ್ಯನಾಗಿರಬಹುದು, ಎಷ್ಟೇ ಶೇಅರು (ಪಾಲು)ಗಳನ್ನು ಧಾರಣಮಾಡಿರಬಹುದು. ಆದರೆ ಮತದಾನದ ಪ್ರಸಂಗದಲ್ಲಿ, ಅವನಿಗೆ ಒಂದೇ ಒಂದು ಮತವಿರುವದು. ಆದರೆ ಕೆಲವೊಂದು ಹೈನದ ಸಂಘಗಳಲ್ಲಿ, ಮತದಾನದ ಹಕ್ಕು ಗೋವುಗಳ ಸಂಖ್ಯೆಯ ಮೇಲೆ ಅವಲಂಬಿಸಿರುವದು. ಇಂಥ ಸಂದರ್ಭಗಳಲ್ಲಿ ಕೂಡ, ತಮಗಿಂತ ಕಡಿಮೆ ಆಕಳುಗಳುಳ್ಳ ಸಭಾಸದರ ಹಕ್ಕು ಬಾಧ್ಯತೆಗಳನ್ನು ಸುಲಿಯುವ ದೃಷ್ಟಿಯಿಂದ, ಸಂಘದ ಹಿತದ ವಿರುದ್ಧವಾಗಿ,

ಹೆಚ್ಚಿನ ಸಂಖ್ಯೆಯ ಗೋವ್ರಗಳ ಬಲದಿಂದ, ತಮ್ಮ ಮತಗಳ ಉಪಯೋಗ ವನ್ನು ಮಾಡಿಕೊಳ್ಳುವವರು ತೀರ ವಿರಳ. ಓರ್ವ ವ್ಯಕ್ತಿಗೆ ಒಂದೇ ಮತ ವೆಂಬುದು ಇಲ್ಲಿಯ ಸಹಕಾರದ ಮಾರ್ಗದರ್ಶಕ ತತ್ವವು.

## ಪ್ರಜಾಸತ್ತಾತ್ಮಕ ಆಡಳಿತೆ.

ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ ಅಥವಾ ಚುನಾ ಯಿಸಲ್ಪಟ್ಟ ಸಮಿತಿಯು ಸಂಘದ ಕಾರ್ಯಕಲಾಪಗಳನ್ನು ನೋಡಿಕೊಳ್ಳು ವದು. ಬಹುತರವಾಗಿ ಎಲ್ಲ ಸಂಘಗಳಲ್ಲಿ ವರ್ಷಕ್ಕೊಮ್ಮೆ ಪಂಚಕಮೀಟಿಯು- ವರ ಅಥವಾ ವ್ಯವಸ್ಥಾಪಕ ಸಮಿತಿಯುವರ ಆಯ್ಕೆಯಾಗುವದು.

## ಉಚಿತ ಸೇವೆ.

ವ್ಯವಸ್ಥಾಪಕ ಸಿಮಿತಿಯ ಸಭಾಸದರು, ತೀರ ಸಣ್ಣ ಪ್ರಮಾಣದ ಸಂಭಾವನೆಯ ಹೊರ್ತಾಗಿ ತಮ್ಮ ಸೇವೆಯನ್ನು ಪುಕ್ಕಟೆಯಾಗಿ ಸಲ್ಲಿ ಸುವದು.

## ಲಾಭವನ್ನು ಕಳೆ ಹಾಕುವ ಪ್ರವೃತ್ತಿ

ಒಕ್ಕಲುತನವ ಪತ್ತಿನ ಬ್ಯಾಂಕು, ಹೈನದ ಸಂಘ, ಕಾಯಿಪಲ್ಯೆ ಹಣ್ಣು ಹಂಪಲಗಳ ಸಂಘಗಳಲ್ಲಿಯ ಲಾಭವು ಹಂಚಲ್ಪಡುವದಿಲ್ಲ. ಬೇರೆ ಪ್ರಕಾರದ ಶೇತ್ಕಿ ಸಹಕಾರಿ ಸಂಘಗಳಲ್ಲಿ, ಕೆಲವೊಂದು ಸಂಘಗಳಲ್ಲಿ ಮಾತ್ರ ಲಾಭವನ್ನು ಹಂಚುವ ಪರಿಪಾಠವಿದೆ.

## ಹೊಣೆ ಅಥವಾ ಜವಾಬದಾರಿ

ಇಲ್ಲಿ ಮೂರು ಪ್ರಕಾರದ ಜವಾಬುದಾರಿಗಳಿರುವವು. (೧) ಅನಿಯ ಮಿತ ಜವಾಬುದಾರಿ (೨) ನಿಯಮಿತ ಜವಾಬುದಾರಿ (೩) ಕಾಯ್ದಿಟ್ಟ ನಿಯಮಿತ ಜವಾಬುದಾರಿ (ಅಂದರೆ Limited with reserve liability ) ಒಕ್ಕಲುತನದ ಪತ್ತಿನ ಬ್ಯಾಂಕುಗಳು ಅಗತ್ಯವಾಗಿ ಅನಿಯಮಿತ ಜವಾಬುದಾರಿಯುಳ್ಳವಿರುವವು. ಇನ್ನುಳಿದ ಒಕ್ಕಲುತನದ ಪ್ರಾಥಮಿಕ ಸಹ- ಕಾರಿ ಸಂಘಗಳೂ ಅನಿಯಮಿತ ಜವಾಬುದಾರಿಯವೇ ಇರುವವು. ಆದರೆ ಸಂಯುಕ್ತ ಸಂಸ್ಥೆಗಳ ವಿಷಯದಲ್ಲಿ ಮಾತ್ರ, ಜವಾಬುದಾರಿಯ ನಿಯಮಿತ ಅಥವಾ ಪರಿಮಿತವಿರುವದು.

## ಆಯ್ಕೆ ಅಥವಾ ಚುನಾವಣೆ

ಪ್ರಾಥಮಿಕ ಸಹಕಾರಿ ಸಂಘಗಳಲ್ಲಿ ಪ್ರತ್ಯಕ್ಷವಾಗಿ ಆಯ್ಕೆಯಾಗುವದು. ಆದರೆ ಸಂಯುಕ್ತ ಸಂಸ್ಥೆಗಳ ಅಥವಾ ದೊಡ್ಡ ದೊಡ್ಡ ಸಂಸ್ಥೆಗಳ ವಿಷಯದಲ್ಲಿ ಅಪ್ರತ್ಯಕ್ಷ ಆಯ್ಕೆಯಾಗುವದು.

## ವಿಕೇಂದ್ರೀಕರಣವೇ ಸಹಕಾರದ ಕೈ

ಸಮಾಜದ ತಳದಲ್ಲಿ ಸಂಘಗಳ ತಳಹದಿಯಿರುವದು. ಅಂತೆಯೇ ಕೆಳಗಣಿಂದ ಸಂಘಗಳು ರಚಿತವಾಗಿ ಕಾರ್ಯ ಸಾಗಿಸುತ್ತವೆ. ಮೇಲಿನ ಸಂಘಗಳು ಆವಶ್ಯಕತೆಗನುಸಾರವಾಗಿ ನಂತರ ಅಸ್ತಿತ್ವದಲ್ಲಿ ಬರುತ್ತವೆ. ಕೆಳಗಿನ ಸಂಘಗಳು ಒಕ್ಕಲಿಗರೊಡನೆಯೂ ಮತ್ತು ಇವ ಪ್ರಾಥಮಿಕ ಸದಸ್ಯನೊಡನೆಯೂ ನಿಕಟಸಂಬಂಧವನ್ನಿಟ್ಟುಕೊಂಡಿರುವವು. ಅಲ್ಲದೆ ಸ್ವರಾಜ್ಯಭಾರವನ್ನು ತಾವೇ ವಹಿಸಿರುವವು ಅಂದರೆ ತಮ್ಮ ಆಡಳಿತೆಯನ್ನು ತಾವೇ ನೋಡಿಕೊಳ್ಳುವವು. ಸೆಕ್ರೇಟರಿ, ಮ್ಯಾನೇಜರ ಮತ್ತಿತರ ನೌಕರ ವರ್ಗಕ್ಕೆ ತಕ್ಕ ಸಂಬಳ ಸಿಗುವದು. ಈ ನೋಕರದಾರರು ತಾಂತ್ರಿಕ ಶಿಕ್ಷಣಪಡೆದು ಸುಶಿಕ್ಷಿತರೂ ಸಮರ್ಥರೂ ಆಗಿರುವರು. ಸಭಾಸದರೂ ಸುಶಿಕ್ಷಿತರಾಗಿ ಸಂಘದ ಆಡಳಿತೆಯಲ್ಲಿ ಆಸಕ್ತಿಯುಳ್ಳವರಾಗಿರುವರು. ಇಲ್ಲಿ ಆರ್ಥಿಕ ದೃಷ್ಟಿಯಿಂದ ದುರ್ಬಲವಾದ ಒಂದೂ ಸಂಸ್ಥೆಯಿಲ್ಲ. ಯಾವದೇ ಒಂದು ಸಂಘವು ಆರ್ಥಿಕ ಪ್ರಪಂಚದಲ್ಲಿ ಅವ್ಯವಸ್ಥಿತ ರೀತಿಯಿಂದ ನಡೆದಿದ್ದಾದರೆ, ಅಥವಾ ಅಸಮಾಧಾನಕರವಾದ ಆಡಳಿತೆಯನ್ನು ನಡೆಯಿಸಿದ್ದಾದರೆ ಸಂಯುಕ್ತಸಂಸ್ಥೆಗಳು ಅದನ್ನು ಸರಿಪಡಿಸಲಿಕ್ಕೆ ಅಥವಾ ತಿದ್ದಲಿಕ್ಕೆ ಬೇಗನೇ ಉಚಿತ ಕ್ರಮವನ್ನು ಕೈಕೊಳ್ಳುವವು. ಅಂಥ ಸಂಘದ ವ್ಯವಹಾರವನ್ನು ಬಂದು ಮಾಡಿ ಅವನ್ನು ರದ್ದು ಪಡಿಸುವ ವ್ಯವಸ್ಥೆಯನ್ನು ಮಾಡಲಾಗುವದು. ಅಥವಾ ಅದನ್ನು ನೆರೆಹೊರೆಯ ಸಂಘದೊಡನೆ ಸಂಯೋಜಿಸಲಾಗುವದು. ಇಲ್ಲದಿದ್ದರೆ ಸಂಯುಕ್ತ ಸಂಸ್ಥೆಯು ಅದರ ಆಡಳಿತೆಯನ್ನು ನಿರ್ವಹಿಸಿಕೊಳ್ಳುವದು ಸರಕಾರದ ಶಾಸನ ನಿಯಂತ್ರಣಗಳಿಗೆ ಒಳಪಟ್ಟಿರದಿದ್ದರೂ ಇಲ್ಲಿಯ ಸಂಘಗಳು ಸಂಪೂರ್ಣವಾಗಿ ಸಂಯುಕ್ತ ಸಂಸ್ಥೆಗಳ ಮೇಲ್ವಿಚಾರಣೆ ನಿಯಂತ್ರಣಗಳಿಗೆ ಒಳಪಟ್ಟಿರುವವು. ಸ್ಥಾನಿಕ ಸಂಸ್ಥೆಯು ಸಂಯುಕ್ತ ಸಂಸ್ಥೆಯ ಸಭಾಸದನಾಗಿಯೇ ಇರಬೇಕೆಂಬ ನಿರ್ಬಂಧವಿರದಿದ್ದರೂ ಒಮ್ಮೆ ಒಂದು ಸ್ಥಾನಿಕ ಸಂಸ್ಥೆಯು ಸಂಯುಕ್ತ ಸಂಸ್ಥೆಯ ಸಭಾಸದತ್ವವನ್ನು

ವಹಿಸಿತೆಂದರೆ, ಅದು ಸಂಯುಕ್ತಸಂಸ್ಥೆಯ ಸಲಹೆ ಸೂಚನೆಗಳನ್ನು ತಪ್ಪದೇ ಬಳಕೆಯಲ್ಲಿ (ಅಮಲಿನಲ್ಲಿ) ತರಲು ಬದ್ಧವಾಗುವವಲ್ಲದೆ, ಅದರ ಮೇಲ್ವಿಚಾರಣೆ ನಿಯಂತ್ರಣಗಳಿಗೆ ಪಾತ್ರವಾಗುವದು. ಆಯಾ ಸಂಯುಕ್ತ ಸಂಸ್ಥೆಗಳು ತಮಗೆ ಸಂಬಂಧಿಸಿದ ಸಂಘಗಳ ಮೇಲ್ವಿಚಾರಣೆ ನಿಯಂತ್ರಣ ಮಾರ್ಗದರ್ಶಕವೆಲ್ಲವನ್ನೂ ಮಾಡುವವು.

## ಸರಕಾರದ ಲೆಕ್ಕ ಪರಿಶೋಧನೆಯಿಲ್ಲ

ಆಯಾ ಸಂಯುಕ್ತ ಸಂಸ್ಥೆಗಳ ಲೆಕ್ಕ ಪರಿಶೋಧನೆಯಲ್ಲಿ ತಜ್ಞರಾದ ನೌಕರ ವರ್ಗದವರಿಂದ ವಾಡಿಕೆಯಾಗಿ ಸಹಕಾರಿ ಸಂಘಗಳ ಲೆಕ್ಕಪರಿಶೋಧನೆಯಾಗುತ್ತದೆ. ಈ ದೇಶದಲ್ಲಿ ಖಾತೆಯ ಅಥವಾ ಸರಕಾರದ ಲೆಕ್ಕ ಪರಿಶೋಧಕರು (ಅಂದರೆ ಆಡಿಟರರು) ಮಾಡುವ ಲೆಕ್ಕಪರಿಶೋಧನೆಯ ಪದ್ಧತಿಯು ಇಲ್ಲ.

ಸಹಕಾರಿ ಸಂಘಗಳ ಕಾಯದೆಯನ್ವಯ ಪ್ರತಿಯೊಂದು ಸಂಘವನ್ನು ನೋಂದಿಸಲೇಬೇಕೆಂಬ ನಿಯಮವೇನೂ ಇಲ್ಲ. ಕೆಲವೊಂದು ಸಂಘಗಳು ಸಾಮಾನ್ಯ ಕಾಯದೆಯನ್ವಯ (ಜನರಲ್ ಆ್ಯಕ್ಟ) ನೋಂದಿಸಲ್ಪಡುತ್ತಿವೆ. ವಿಮೆಯ ಸಹಕಾರಿ ಸಂಘಗಳು ವಿಶಿಷ್ಟ ಕಾಯದೆಯನ್ವಯ ನೊಂದಿಸಲ್ಪಡುವವು. ಆದರೆ ಸಂಘಗಳು ಮಾತ್ರ ಸಹಕಾರಿ ತತ್ವಗಳಿಗೆ ಅನುಗುಣವಾಗಿ ಚಾಚೂ ತಪ್ಪದೆ ತಮ್ಮ ಕಾರ್ಯವನ್ನು ನಡೆಯಿಸಿಕೊಂಡು ಹೋಗುವವು.

ಸಹಕಾರಿ ಚಳವಳಿಯಲ್ಲಿ ಧರ್ಮವೂ ಒಂದು ಪ್ರಧಾನಪಾತ್ರವನ್ನು ವಹಿಸುವದು. ಒಟ್ಟು ಜನಸಂಖ್ಯೆಯ ⅓ ದಷ್ಟಿರುವ, ದೇಶದ ದಕ್ಷಿಣ ಭಾಗದಲ್ಲಿ ಬಹುಸಂಖ್ಯಾಕರಾದ ರೋಮನ್ ಕ್ಯಾಥೋಲಿಕ್‌ರು ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆಗಳಿಂದ, ಸಂಘಗಳಿಂದ ಒಂದು ದೊಡ್ಡ ಪಂಗಡವಾಗಿ ಮೆರೆಯುತ್ತಿರುವರು ಅವರು ತಮ್ಮ ಒಕ್ಕಲಿಗರ ಸಲುವಾಗಿ ಕೂಲಿಗಾರರ ದುಡಿಮೆಗಾರರ ಸಲುವಾಗಿ ಗಿರಾಕಿಗಳ ಸಲುವಾಗಿ ವಿಶಿಷ್ಟ ಪ್ರಕಾರದ ಸಂಘಗಳನ್ನು ಸ್ಥಾಪಿಸಿರುವರು. ಧರ್ಮದ ಪ್ರಬಲ ಪ್ರಭಾವದಿಂದ ಅಲ್ಲಿಯ ಪ್ರಾಥಮಿಕ ಸಹಕಾರಿ ಸಂಘಗಳು ಯುಟ್ರೆಚಟ್ಟನಲ್ಲಿಯ ಕೇಂದ್ರ ಬ್ಯಾಂಕಿಗೆ ತೀರ ಸಮೀಪವಾಗಿದ್ದರೂ ಅವರ ಸಭಾಸದತ್ವವನ್ನು ವಹಿಸದೆ ಐಂದೋವ್ಹೆನ್ನಿನಲ್ಲಿಯ ಬ್ಯಾಂಕಿನ ಸದಸ್ಯತ್ವವನ್ನು ವಹಿಸಿರುವವು.

# ಸಮಾಜ ಭಾವನೆ ಮತ್ತು ಸಾಂಘಿಕ ಕಲ್ಪನೆಗಳ ವಿಕಾಸ

ಕೆಳಗಿನ ಪ್ರಾಥಮಿಕ ಸಂಘಗಳ ಸಭಾಸದರು ಅವುಗಳ ಆಡಳಿತೆಯಲ್ಲಿ ಕಾರ್ಯಕಲಾಪಗಳಲ್ಲಿ ಸಾಕಷ್ಟು ಶ್ರದ್ಧೆ ಆಸಕ್ತಿಗಳನ್ನು ವಹಿಸುವರು. ಆದರೆ ಅದೇ ಮೇಲಿನ ವಿಶೇಷವಾಗಿ ದೊಡ್ಡ ದೊಡ್ಡ ಸಂಸ್ಥೆಗಳಲ್ಲಿ ಸಾಮಾನ್ಯ ಸದಸ್ಯರಿಗೆ, ದಿನದಿನದ ಕಾರ್ಯಕಲಾಪಗಳೊಡನೆ ಸಂಬಂಧವನ್ನಿಟ್ಟುಕೊಳ್ಳುವವೂ, ಅವುಗಳಲ್ಲಿ ಭಾಗವಹಿಸುವವೂ ಸಾಧ್ಯವಾಗುವದಿಲ್ಲ. ದೊಡ್ಡ ದೊಡ್ಡ ಸಂಸ್ಥೆಗಳು ವಿಶೇಷವಾಗಿ ಆಯಾ ವಿಷಯುಗಳಲ್ಲಿ ತಜ್ಞರೂ ಪ್ರವೀಣರೂ ಆದವರ ಮತ್ತು ಮ್ಯಾನೇಜರರ ಮೇಲ್ವಿಚಾರಣೆ ಆಡಳಿತೆಗಳಿಗೆ ಒಳಪಡುವವು.

ತರುಣ ಪೀಳಿಗೆಯು ಸಹಕಾರಿ ಸಂಘಗಳಲ್ಲಿ ಸಾಕಷ್ಟು ಮನಸ್ಸು ಹಾಕುವದಿಲ್ಲ. ಯಾಕೆಂದರೆ ಸಹಕಾರಿ ಸಂಘಗಳು ಪೂರೈಸಬಹುದಾದ ಅನುಕೂಲತೆಗಳನ್ನು ಅವರು ಖಾಸಗೀ ವ್ಯವಹಾರದ ಮುಖಾಂತರ ಪಡೆಯುತ್ತಿರುವರು. ಅವರು ಕಾಲಾಂತರದಲ್ಲಿ ಯಾವ ತಡೆತೊಂದರೆಗಳಿಲ್ಲದೆ ಸಹಕಾರದಲ್ಲಿ ಮನಸ್ಸು ಹಾಕಬಹುದೆಂದು ಆಶಿಸೋಣವೇ ?

ತರುಣ ಪಿಳಿಗೆಯು ಸಹಕಾರ ಚಳುವಳಿಯಲ್ಲಿ ಮನಸ್ಸುಹಾಕಿ, ಸಹಕಾರಿ ಸಂಘಗಳೊಡನೆ ಶ್ರದ್ಧೆಯಿಂದ ವರ್ತಿಸುವಹಾಗೆ ಮತ್ತು ಸಹಕಾರ ಚಳವಳಿಯು ಒಂದು ಜೀವಂತ ಚಳವಳಿಯಾಗುವಹಾಗೆ ಅನೇಕ ಬಗೆಯ ಚಟುವಟಿಕೆಗಳು ಕೈಕೊಳ್ಳಲ್ಪಟ್ಟಿವೆ. ಮತ್ತು ಸಾಕಷ್ಟು ಪ್ರಚಾರ ಕಾರ್ಯವೂ ನಡೆದಿದೆ.

ಈ ಮೇರೆಗೆ ಸಹಕಾರವು ಬಡ ಒಕ್ಕಲಿಗರಲ್ಲಿ ಜನ್ಮವೆತ್ತಿತು. ದೇಶದ ಉತ್ತರ ಭಾಗದಲ್ಲಿರುವ ಗ್ರಾನಿಂಜೆನ್ ಪ್ರಾಂತದಲ್ಲಿಯ ವಿನ್‌ಸಮ್ ಹಳ್ಳಿಯಲ್ಲಿ ೧೭೭೪–೭೫ರಲ್ಲಿ ಪರಸ್ಪರ ಸಹಾಯಕ ಅಗ್ನಿ ವಿಮೆ ಸಂಘವು ಸ್ಥಾಪಿಸಲ್ಪಟ್ಟರೂ, ಈ ಸಹಕಾರ ಚಳವಳಿಯು ಪ್ರತ್ಯಕ್ಷವಾಗಿ ಹದಿನೆಂಟನೆ ಮತ್ತು ಹತ್ತೊಂಬತ್ತನೇ ಶತಮಾನಗಳಲ್ಲಿ ಆರಂಭವಾಯಿತು. ಒಕ್ಕಲಿಗರು ತೀರ ಕೀಳಸ್ಥಿತಿಯಲ್ಲಿದ್ದರು ವ್ಯವಹಾರದಲ್ಲಿ ನಡುವೆ ನಿಂತು ದಲಾಲರಿಂದ ಅವರ ಸುಲಿಗೆಯು ಅವ್ಯಾಹತವಾಗಿ ನಡೆದಿದ್ದಿತು. ೧೮೮೦ ರಲ್ಲಿ ಒಕ್ಕಲುತನಕ್ಕೊದಗಿದ ಗಂಡಾಂತರವು ಈ ಪರಿಸ್ಥಿತಿಯನ್ನು ಮತ್ತೂ ಕೆಣಕಿತು ಕೆರಳಿ-

ಸಿತು. ಒಕ್ಕಲಿಗರೂ ಮತ್ತು ಬೆಳೆಯುವವರೂ ಈ ಸುಲಿಗೆಗಾರರಿಂದ ಮುಕ್ತ-ರಾಗುವ ಹಾದಿಯನ್ನು ಹುಡುಕಹತ್ತಿದರು. ಮೊದಮೊದಲು ಅವರು ಒಕ್ಕಲಿಗರ ಸಂಯುಕ್ತ ಸಂಸ್ಥೆ (ಯುನಿಯನ್)ಗಳ ರೂಪದಲ್ಲಿ ಕೂಡಹತ್ತಿದರು. ಪ್ರತಿಯೊಂದು ಹಳ್ಳಿಯಲ್ಲಿಯೂ ಇಂಥ ಯುನಿಯನ್ ಅಥವಾ ಸಂಯುಕ್ತ ಸಂಸ್ಥೆಗಳು ಕೂಡಲೇ ಜನ್ಮವೆತ್ತಿದವಲ್ಲದೆ, ಅವುಗಳ ಸಂಖ್ಯೆಯೂ ಬೆಳೆಯಹತ್ತಿತು. ಈ ಒಕ್ಕಲಿಗರ ಯುನಿಯನ್ನುಗಳ ಮುಖಂಡರು ಐಕ್ಯ ಮತ್ತು ಸಹಕಾರಗಳಲ್ಲಿಯೇ ತಮ್ಮ ಮುಕ್ತಿಯಿದೆಯೆಂದು ಕೂಡಲೇ ಕಂಡು-ಕೊಂಡರು. ಸಾಮಾಜಿಕ, ಸಾಂಘಿಕ, ಸಂಘಟಿತ ಭಾವನೆಗಳು ವಿಕಾಸ ಗೊಂಡವು. ಪ್ರತ್ಯೇಕತೆಯ ಮತ್ತು ವೈಯಕ್ತಿಕತೆಯ ಭಾವನೆಗಳು ಉಗಿ-ಯಂತೆ ಕರಗಿ ಹಾರಿ ಹೋದವು. ಒಕ್ಕಲಿಗನ ಆರ್ಥಿಕ ಪುನರುಜ್ಜೀವನ-ಕ್ಕಾಗಿ ಯಾವುದಾದರೊಂದು ಶಾಶ್ವತವಾದ ನಿತ್ಯವಾದ ಉಪಾಯವಿದ್ದರೆ ಅದು ಸ್ವಾವಲಂಬನೆ ಮತ್ತು ಪರಸ್ಪರ ಸಹಾಯವೇ ಸರಿ ಎಂಬುವದನ್ನು ಅವರು ಮನಗಂಡರು. ಇದೇ ಕಾಲಕ್ಕೆ ಸ್ಕ್ಯಾಂಡಿನೇವ್ಹಿಯಾ ಮತ್ತು ಜರ್ಮನಿಗಳಲ್ಲಿ ಒಕ್ಕಲಿಗರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಉದ್ದೇ-ಶದಿಂದ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿ ಬಂದು ಈ ದಿಶೆಯಲ್ಲಿ ಯಶಸ್ವಿ-ಯಾದವು. ಗ್ರೇಟಬ್ರಿಟನ್ನಿನಲ್ಲಿ ಬಳಕೆಗಾರರ ಸಂಘಗಳನ್ನು ನಡೆಯಿಸುವಲ್ಲಿ ರಾಚಡೇಲ ಮುಖಂಡರು ಕೈಕೊಂಡ ಪ್ರಯತ್ನಗಳು ಯಶಸ್ವಿಯಾಗಿರುವ-ದನ್ನು ಈ ದೇಶದ ಜನರು ಅರಿತಿದ್ದರು. ಅದರಂತೆಯೇ ಈ ದೇಶದ ಒಕ್ಕಲಿಗರು ಒಂದಾಗಿ, ಒಟ್ಟುಗೂಡಿ ಬೇರೆ ಬೇರೆ ಉದ್ದೇಶಗಳ ಸಲುವಾಗಿ ಸಹಕಾರಿ ಸಂಘಗಳನ್ನು ಸ್ಥಾಪಿಸಿದರು. ಮೊಟ್ಟಮೊದಲನೇ ಸಂಘವೆಂದರೆ ೧೮೬೬ ರಲ್ಲಿ ಸುಸ್ಥಿರತೆಯ ಸಾಧನಗಳನ್ನು ಕೊಳ್ಳುವ ಸಲುವಾಗಿ ಸ್ಥಾಪಿ-ತವಾದ ಸಂಘವೇ ಸರಿ. ೧೮೮೨, ೧೮೮೬ ಮತ್ತು ೧೮೯೫ ರಲ್ಲಿ ಅನುಕ್ರಮ ವಾಗಿ ಹೈನದ ಸಂಘ, ಕಾಯಿಪಲ್ಯೆಗಳನ್ನು ಲಿಲಾವು ಮಾಡುವ ಸಂಸ್ಥೆ, ಮತ್ತು ಪಕ್ಷಿನ ಸಂಘಗಳು ಸ್ಥಾಪಿತವಾದವು. ೧೯೧೭ರಲ್ಲಿ ಸಹಕಾರಿ ಸಂಘ-ಗಳ ಸಲುವಾಗಿ ಒಂದು ವಿಶಿಷ್ಟ ಕಾಯದೆಯು ಜಾರಿಯಲ್ಲಿ ಬಂದಿತು. ಅದೇ ಮುಂದೆ ೧೯೨೫ರಲ್ಲಿ ತಿದ್ದುಪಡಿ ಹೊಂದಿತು. ಆದರೆ ಈ ಸಹಕಾರಿ ಕಾಯದೆಯ ಪ್ರಕಾರ ಪ್ರತಿಯೊಂದು ಸಹಕಾರಿ ಸಂಘವು ನೋಂದಿಸ-ಲ್ಪಡಲೇಬೇಕೆಂಬ ನಿ ಬ ರ್ ಂ ಧ ವೇ ನೂ ಇಲ್ಲ. ತಮ್ಮ ಇ ಚ್ಛೆ ಯ ಂ ತೆ

ಆಡಳಿತೆಯನ್ನು ನಡೆಯಿಸಿಕೊಂಡು ಹೋಗಲು ಸಹಕಾರಿ ಸಂಘಗಳಿಗೆ ಕಾಯದೆಯು ಸ್ವಾತಂತ್ರ್ಯವನ್ನು ಕೊಟ್ಟಿದೆ. ಇವುಗಳ ಮೇಲೆ ಇರುವ ಸರಕಾರದ ನಿಯಂತ್ರಣವೆಂದರೆ ಅತ್ಯಲ್ಪ. ಆದರೆ ಸಹಕಾರಿ ಸಂಘಗಳು ವರ್ಷಕ್ಕೊಮ್ಮೆ ಸಂಬಂಧಿಸಿದ ಅಧಿಕಾರಿಗಳ ಕಡೆಗೆ ಅಂಕಿಸಂಖ್ಯೆಗಳಿಂದೊಡಗೂಡಿದ ಮಾಹಿತಿಯನ್ನು ಕಳಿಸಬೇಕಾಗುವದು ಮಾತ್ರ.

ಈ ಸಂಘಗಳ ಸ್ಥಾಪನೆಯಾರಂಭದಿಂದಲೇ ಯಶಸ್ವಿಯಾದ ಆಡಳಿತೆ, ಮುಖಂಡರಿಂದ ನಡೆಯಿಸಲ್ಪಟ್ಟ ಸಹಕಾರ ಚಳವಳಿಯ ಪರಿಣಾಮಕಾರಿಯಾದ ಪ್ರಚಾರ, ಶಿಕ್ಷಣದ ಪ್ರಸಾರ, ಸಾಮಾಜಿಕ ಭಾವನೆಯ ವೈಶಾಲ್ಯ ಎಲ್ಲವೂ ಕೂಡಿ ಸಹಕಾರ ಚಳವಳಿಯ ತೀವ್ರ ಪ್ರಗತಿಗೆ ಕಾರಣವಾದವು. ೧೯೦೦--೨೦ರಲ್ಲಿ ಸಂಘಗಳ ಸಂಖ್ಯೆ ಬೆಳೆದು ಚಳವಳಿಯ ಅವಾಘವ್ಯ ಪ್ರಗತಿಯಾಯಿತು. ಒಕ್ಕಲಿಗರ ಎಲ್ಲ ಬಗೆಯ ಅಡಚಣಿಗಳನ್ನು ಪೂರೈಸುವ ಎಲ್ಲ ಪ್ರಕಾರದ ಸಹಕಾರಿ ಸಂಘಗಳು ತಲೆಯೆತ್ತಿದವು. ೧೯೨೦ ರಿಂದ ೧೯೩೦ ರ ವರೆಗೆ, ಸಂಯುಕ್ತ ಸಂಸ್ಥೆಗಳನ್ನು ಸಂಘಟಿಸಿ, ಕೆಟ್ಟ ಸಂಘಗಳನ್ನು ಗೊತ್ತಿಗೆ ಹಚ್ಚಿ, ಇದ್ದ ಸಂಘಗಳ ಕಾರ್ಯಕ್ರಮಗಳನ್ನು, ಚಟುವಟಿಕೆಗಳನ್ನು ವಿಸ್ತೃತಗೊಳಿಸಿ, ಸಹಕಾರ ಚಳವಳಿಯನ್ನು ಭದ್ರಪಡಿಸುವ ಯೋಜನೆಗಳು ಕೈಕೊಳ್ಳಲ್ಪಟ್ಟವು. ೧೯೨೫ ರಲ್ಲಿ ಸಹಕಾರ ಕಾಯದೆಯನ್ವಯ ನೋಂದಿಸಲ್ಪಟ್ಟ ಸಂಘಗಳ ಸಂಖ್ಯೆ ೩೦೪೦ ಇದ್ದಿತು. ಕಳೆದ ಇಪ್ಪತ್ತೈದು ವರ್ಷಗಳಲ್ಲಿಯ ಸಹಕಾರ ಚಳವಳಿಯ ಪ್ರಗತಿಯನ್ನು ಕೆಳಗಿನ ಪತ್ರಿಕೆಯು ಪ್ರದರ್ಶಿಸುತ್ತದೆ.

| ವರ್ಷ | ಸಂಘಗಳ ಸಂಖ್ಯೆ |
|---|---|
| ೧೯೨೫ | ೩೦೪೦ |
| ೧೯೩೦ | ೬೧೩೧ |
| ೧೯೩೫ | ೩೨೨೩ |
| ೧೯೪೦ | ೩೩೭೧ |
| ೧೯೪೯ | ೩೯೭೫ |

ಅಲ್ಲದೆ ಸಹಕಾರ ಕಾಯದೆಯ ಕೆಳಗೆ ನೋಂದಿಸಲ್ಪಡದಿರುವ ಸಂಘಗಳ ಸಂಖ್ಯೆಯೂ ಬಹು ದೊಡ್ಡದಿದ್ದು, ಅವೆಲ್ಲ, ಸಹಕಾರ ತತ್ತ್ವಗಳಿಗನುಸರಿಸಿ ತಮ್ಮ ವ್ಯವಹಾರವನ್ನು ಸಾಗಿಸುತ್ತವೆ. ೧೯೪೯ ಜನವರಿ ೧ ನೆಯ

ತಾರೀಖಿನ ವರೆಗೆ ಸಹಕಾರ ಕಾಯಿದೆಯನ್ವಯ ನೋಂದಿಸಲ್ಪಟ್ಟ ಸಂಘಗಳು ಯಾವ ಯಾವ ಪ್ರಕಾರದವು, ಅವುಗಳ ಸಂಖ್ಯೆ ಎಷ್ಟು ಎಂಬುದನ್ನು ಕೆಳಗಿನ ಪತ್ರಿಕೆಯು ಸ್ಪಷ್ಟಪಡಿಸುವದು.

## ಒಕ್ಕಲಿಗರ ಸಂಘಗಳು

| ಸಂಘಗಳ ಪ್ರಕಾರ | ಸಂಖ್ಯೆ |
|---|---|
| ಹೈನದ ಸಂಘಗಳು | ೪೨೬ |
| ಒಕ್ಕುವ ಸಂಘಗಳು | ೨೦೪ |
| ಹುಲ್ಲನ್ನು ಕೃತ್ರಿಮ ರೀತಿಯಿಂದ ಒಣಗಿಸುವ ಸಂಘಗಳು | ೩೯ |
| ಇತರ ಸಂಘಗಳು | ೪೮ |
| ಖರೀದಿ ಮಾಡುವ ಸಂಘಗಳು | ೯೯೨ |
| ಕಾಯಿಪಲ್ಯೆ ಹಣ್ಣು ಹಂಪಲಗಳನ್ನು ಮಾರುವ ಸಂಘಗಳು | ೭೦ |
| ಕೋಳಿಮರಿಗಳ ಮತ್ತು ತತ್ತಿಗಳ ಸಂಘಗಳು | ೨೪ |
| ಬೀಜದ ಆಲುಗಡ್ಡೆಗಳನ್ನು ಕಾಯ್ದಿಡುವ ಸಂಘಗಳು | ೭೫ |
| ಇತರ ಸಂಘಗಳು | ೯೪ |
| ಪತ್ತಿನ ಸಂಘಗಳು | ೮೦೪ |
| ವಿಮೆಯ ಸಂಘಗಳು | ೪೧ |
| ಇತರ ಸಂಘಗಳು | ೧೮೦ |
| ಒಟ್ಟು ಒಕ್ಕಲಿಗರ ಸಂಘಗಳು | ೨೯೯೭ |

## ಔದ್ಯೋಗಿಕ ಮತ್ತು ಶಿಲ್ಪಗಾರರ ಸಂಘಗಳು

| | |
|---|---|
| ಉತ್ಪಾದಕರ ಸಂಸ್ಥೆಗಳು | ೧೭ |
| ಇತರ ಸಂಘಗಳು | ೮ |
| ಒಟ್ಟು | ೨೫ |
| ಮಧ್ಯಮ ವರ್ಗದ ಸಹಕಾರಿ ಸಂಘಗಳು | ೨೭೩ |

## ಬಳಿಕೆಗಾರರ ಸಹಕಾರಿ ಸಂಘಗಳು

| | |
|---|---|
| ಬಳಿಕೆಗಾರರ ಸಹಕಾರಿ ಸಂಘಗಳು | ೪೩೪ |
| ವಸತಿಯ ಸಂಘಗಳು | ೧೦೦ |
| ಇತರ ಸಂಘಗಳು | ೪೧ |
| ಒಟ್ಟು | ೫೭೫ |

| ಪ್ರಕಾರಗಳು | ಸಂಖ್ಯೆ |
| --- | --- |
| ಪತ್ತಿನ ಸಂಘಗಳು (ಶೇತ್ಕಿ ಪತ್ತಿನ ಸಂಘಗಳನ್ನು ಬಿಟ್ಟು) | ೪೫ |
| ವಿಮೆಯ ಸಂಘಗಳು (ಶೇತ್ಕಿ ವಿಮೆಯ ಸಂಘಗಳನ್ನು ಬಿಟ್ಟು) | ೨೯ |
| ಮತ್ತಿತರ ಸಂಘಗಳು | ೩೧ |
| | ೧೦೫ |
| ಸಹಕಾರಿ ಸಂಘಗಳ ಕಾಯದೆಯನ್ವಯ ನೊಂದಿಸಲ್ಪಟ್ಟ ಎಲ್ಲ ಪ್ರಕಾರವ ಸಂಘಗಳ ಒಟ್ಟು ಸಂಖ್ಯೆ | ೩೯೭೫ |

ಸಹಕಾರಿ ಸಂಘಗಳ ಕಾಯದೆ, ಸ್ಪೇಶಲ್ ಮತ್ತು ಜನರಲ್ ಅಂದರೆ ವಿಶಿಷ್ಟ ಮತ್ತು ಸಾಮಾನ್ಯ ಕಾಯದೆಗಳನ್ವಯ ನೋಂದಿಸಲ್ಪಟ್ಟ ಸಹಕಾರಿ ಸಂಘಗಳ ಪರಿಸ್ಥಿತಿಯನ್ನು ಕೆಳಗಿನ ವಿವರಣೆಯಿಂದ ಕಂಡುಕೊಳ್ಳಬಹುದು.

## ಒಕ್ಕಲುತನದ ಪತ್ತಿನ ಸಂಸ್ಥೆಗಳು

| ಪ್ರಕಾರ | ಸಂಖ್ಯೆ |
| --- | --- |
| ಕೇಂದ್ರ ಬ್ಯಾಂಕುಗಳು | ೨ |
| ಹೈನದ ಬ್ಯಾಂಕುಗಳು | ೨ |
| ಶೇತ್ಕಿ ಪತ್ತಿನ ಸಂಘಗಳು | ೧೩೨೦ |
| ಖರೀದಿ ವಿಕ್ರಿ ಸಂಘಗಳು | ೧೧೬೧ |
| ಖರೀದಿ ವಿಕ್ರಿ ಸಂಘಗಳ ಕೇಂದ್ರ ಸಂಸ್ಥೆಗಳು | ೫ |
| ಬೀಜ ವ ಆಲುಗಡ್ಡೆಗಳ ಉಗ್ರಣವನ್ನು ತಡೆಯಿಸುವ ಸಂಘಗಳು | ೧೨೩ |
| ಸಹಕಾರಿ ಹೈನದ ಸಂಘಗಳು | ೪೫೦ |
| ಮಾರ್ಕೆಟಿಂಗ ಸಂಸ್ಥೆಗಳು (ಮಧ್ಯವರ್ತಿ ಸಂಸ್ಥೆ) | ೭+೧ |
| ಸಹಕಾರಿ ಹೈನವ ಕಾರಖಾನೆಗಳ ಪ್ರಾಂತಿಕ ಸಂಸ್ಥೆಗಳು | ೮ |
| ರಾಷ್ಟ್ರೀಯ ಹೈನವ ಸಂಯುಕ್ತ ಸಂಸ್ಥೆ (ಯುನಿಯನ್) | ೧ |
| ಸಹಕಾರಿ ಆಗಸೇನಾರಿನ ಕಾರಖಾನೆ | ೧ |
| ಹುಲ್ಲು ಒಣಗಿಸುವ ಸಹಕಾರಿ ಸಂಘಗಳು (ಮಧ್ಯವರ್ತಿ ಸಂಸ್ಥೆ) | ೫೨+೧ |
| ಕಾಯಿಪಲ್ಲ್ಯೆಗಳ ಸಂಘಗಳು | ೧೬೨ |
| ಕಾಯಿಪಲ್ಯೆ, ಹೂವು, ಹಣ್ಣು ಹಂಪಲಗಳನ್ನು ಮಾರುವ ಸಂಘಗಳ ಕೇಂದ್ರ ಸಂಸ್ಥೆಗಳು | ೧ |

| | |
|---|---|
| ತತ್ತಿ ಮಾರುವ ಸಂಘಗಳು (ಮಧ್ಯವರ್ತಿ ಸಂಸ್ಥೆ) | ೪೪+೧ |
| ತತ್ತಿಗಳನ್ನು ಕಲಿಹಾಕುವ ಕೇಂದ್ರಗಳು (ಸ್ಟೇಶನ್ನಗಳು) | ೮೦೦ |
| ಬೀಜ ಮತ್ತು ಬೀಜದ ಆಲುಗಡ್ಡೆಗಳನ್ನು ಮಾರುವ (ಮಾರ್ಕೆಟಿಂಗ) ಸಂಸ್ಥೆಗಳು (ಮಧ್ಯವರ್ತಿ ಸಂಸ್ಥೆ) | ೩೮+೧ |
| ಯಂತ್ರ ಯಂತ್ರೋಪಕರಣಗಳ ಸಂಘಗಳು ಮಧ್ಯವರ್ತಿ ಸಂಸ್ಥೆ | ೩೨೩+೧ |
| ಯಂತ್ರ ಯಂತ್ರೋಪಕರಣಗಳನ್ನು ನಡೆಯಿಸುವ ಖರೀದಿ ವಿಕ್ರಿ ಮಾಡುವ ಒಕ್ಕಲುತನದ ಸಂಘಗಳು | ೩೬೪ |

| ಪ್ರಕಾರ | ಸಂಖ್ಯೆ |
|---|---|
| ಕೃತ್ರಿಮ ರೀತಿಯಿಂದ ಬಿತ್ತುವ ಪ್ರಯೋಗ ಮಾಡುವ ಸಂಘಗಳು | ೧೪೩ |
| ಗ್ರಾಹಕ ಸಂಘಗಳು | ೩೦೯ |
| ಗ್ರಾಹಕರ ಸಹಕಾರೀ ಕೇಂದ್ರ ಸಂಸ್ಥೆ | ೧ |
| ವಿಮೆಯ ಕಂಪನಿಗಳು (ಮಧ್ಯವರ್ತಿ ಸಂಸ್ಥೆ) | ೨೪೧ + ೧ |
| ಮ್ಯೂಚ್ಯುಲ್ ಇ-ಇನ್ಶ್ಯುರನ್ಸ ಕಂಪನಿಗಳು (ಪರಸ್ಪರ ವಿಮೆ ಇಳಿಸುವ ಕಂಪನಿಗಳು) | ೧೩೬ |
| ಆಣೆಕಲ್ಲು ವಿಮೆ ಇಳಿಸುವ ಸಂಸ್ಥೆಗಳು | ೧೩ |
| ಅಂತ್ಯಕ್ರಿಯೆಯ ಸಂಸ್ಥೆಗಳು | ೧೦೧೫ |
| ಗೃಹ ರಚನಾ ಸಂಸ್ಥೆಗಳು | ೧೧೦೦ |
| ಸಣ್ಣ ಸಣ್ಣ ಚಿಲ್ಲರೆ ವ್ಯಾಪಾರಿಗಳ ಸಹಕಾರಿ ಸಂಘಗಳು | ೫೧ |
| ಸಹಕಾರಿ ಒಕ್ಕುವ ಸಂಘಗಳು | ೨೨೩ |
| ಸಹಕಾರಿ ಕಟಿಕರ ಸಂಸ್ಥೆಗಳು (ಮಧ್ಯವರ್ತಿ ಸಂಸ್ಥೆ) | ೧೦+೨ |
| ಸಹಕಾರಿ ರಟ್ಟು ತಯಾರಿಸುವ ಕಾರಖಾನೆಗಳು | ೧೯ |
| ಬೀಟ ಗಡ್ಡೆಯಿಂದ ಸಕ್ಕರೆ ತಯಾರಿಸುವ ಸಹಕಾರಿ ಕಾರಖಾನೆಗಳು (ಮಧ್ಯವರ್ತಿ ಸಂಸ್ಥೆ) | ೬ + ೧ |
| ಸಹಕಾರಿ ಆಲುಗಡ್ಡೆ ಹಿಟ್ಟಿನ ಕಾರಖಾನೆಗಳು ಮಧ್ಯವರ್ಥಿ ಸಂಸ್ಥೆ) | ೧೫+೧ |
| ಕೃತ್ರಿಮ ಸುಪೀಕತೆಯ ಸಾಧನಗಳನ್ನು ತಯಾರಿಸುವ ಸಹಕಾರಿ ಕಾರಖಾನೆಗಳು | ೧ |

ಒಕ್ಕಲಿಗನ ಪ್ರತಿಯೊಂದು ಚಟುವಟಿಕೆಯನ್ನು ಆವರಿಸಿ ಸುತ್ತ ಮುತ್ತುವ, ಸರ್ವಮಾನ್ಯವಾದ ಉದ್ದೇಶವುಳ್ಳ, ಸರ್ವಸಾಮಾನ್ಯವಾದ ಮನಃ ಪ್ರವೃತ್ತಿಯುಳ್ಳ ಬೇರೆ ಬೇರೆ ಪ್ರಕಾರದ ಅನೇಕ ಸಂಘಗಳು ಒಂದರಲ್ಲಿ

ಇನ್ನೊಂದು ಹೇಗೆ ಹೆಣೆದುಕೊಂಡಿವೆ ಎಂಬುವದನ್ನು ಮೇಲಿನ ಸಂಘಗಳಿಂದ ಆ ಸಂಘಗಳ ಅಂಕಿ ಸಂಖ್ಯೆಗಳಿಂದ ಕಂಡುಕೊಳ್ಳಬಹುದು. ಒಕ್ಕಲಿಗನ ಪ್ರತಿಯೊಂದು ಅಡಚಣೆಯೂ ಮೇಲೆ ವಿವರಿಸಿದ ಒಂದಿಲ್ಲೊಂದು ಬಗೆಯ ಸಹಕಾರಿ ಸಂಘಗಳಿಂದ ಪೂರೈಸಲ್ಪಡುವದು. ಅಕಸ್ಮಾತ್ತಾಗಿ ಘಟಿಸಿದ ಆಪತ್ತಿಗಾಗಿ ವಿಮೆ ಇಳಿಸುವ, ಹಿಮಪಾತ ಝಂಝಾವಾತಗಳ ವಿರುದ್ಧವಾಗಿ ವಿಮೆಯ ವ್ಯವಸ್ಥೆಮಾಡುವ, ಮತ್ತು ದನಕರುಗಳ ವಿಮೆ ಇಳಿಸುವ ಅನೇಕ ಸಂಸ್ಥೆಗಳು ಇಲ್ಲಿ ಉಂಟು. ದನಗಳಿಗೆ ಅಂಟಿಕೊಳ್ಳುವ ಕ್ಷಯರೋಗ ಪ್ರತಿಬಂಧಕ ಸಹಕಾರಿ ಸಂಸ್ಥೆಗಳು ಇವೆ. ಖರೀದಿ ವಿಕ್ರಿಯ ಸಹಕಾರಿ ಸಂಸ್ಥೆಗಳು ಉಂಟು. ಒಕ್ಕಲಿಗರ ಪತ್ತಿನ ಅವಶ್ಯಕತೆಗಳನ್ನು ಪೂರೈಸುವ ಬಲಿಷ್ಠವಾದ ಪತ್ತಿನ ಸಂಸ್ಥೆಗಳೂ ಉಂಟು. ದನಕರು ಕುದುರೆಗಳನ್ನು ಸಂರಕ್ಷಿಸುವ ಸಂಗೋಪನೆಗೈಯುವ ಸಹಕಾರಿ ಸಂಘಗಳೂ ಇವೆ. ಒಟ್ಟಾರೆ ಸಹಕಾರ ಚಳವಳಿಯ ಮುಖಾಂತರ ಕೈಕೊಳ್ಳಲಾರದ ಒಂದೂ ಚಟುವಟಿಕೆಯಿಲ್ಲ. ಸಹಕಾರಿ ಸಂಘಗಳ ಮುಖಾಂತರ ಪೂರೈಸಲ್ಪಡಲಾರದ ಒಂದೂ ಅಡಚಣೆಯಿಲ್ಲ. ಅಡಚಣೆ ಬಂದಾಗ, ಅವಶ್ಯಕತೆ ತಲೆಯೆತ್ತಿದಾಗ, ಅದರ ಪರಿಹಾರಕ್ಕಾಗಿ ಒಕ್ಕಲಿಗರು ಸಂಘಟಿತರಾಗುವರು. ಬೇರೆ ಬೇರೆ ಪ್ರಕಾರದ ಹತ್ತಿಪ್ಪತ್ತು ಸಹಕಾರಿ ಸಂಘಗಳ ಸದಸ್ಯನಾಗುವದು ಅಲ್ಲಿಯ ಒಕ್ಕಲಿಗನಿಗೆ ರೂಢಿಯೇ ಆಗಿ ಬಿಟ್ಟಿದೆ.

ಈ ಮೇರೆಗೆ ಒಕ್ಕಲಿಗರಿಗೆ ಸಹಕಾರವು ಸುಖವನ್ನು ಸಮೃದ್ಧಿಯನ್ನು ಒದಗಿಸಿಕೊಟ್ಟಿತು. ಸಂಘಗಳಲ್ಲಿಯ ಆರ್ಥಿಕ ವೃತ್ತಿಯಿಂದ ಬಲಿಷ್ಠವಾದ ತತ್ವಗಳಿಂದ, ಸತ್ವಗಳಿಂದ, ದುರ್ಬಲನಾದ ಒಕ್ಕಲಿಗನು ಸ್ವಾರ್ಥಿಗಳನ್ನು ಸುಲಿಗೆಯನ್ನು ಎದುರಿಸಲು, ಎದುರಿಸಿ ಎದೆ ಯೆತ್ತಿ ತಲೆಯೆತ್ತಿ ನಿಲ್ಲಲು, ಬಲವನ್ನೂ ಹಕ್ಕನ್ನೂ ಪಡೆಯುವನು. ಸಹಕಾರ ಪದ್ಧತಿಯ ಸ್ವೀಕಾರದಿಂದ ಒಕ್ಕಲಿಗನು ಉತ್ಪಾದಕನಾಗುವನು, ಬಂಡವಲನಾಗುವನು. ಮಾಲನ್ನು, ಪದಾರ್ಥಗಳನ್ನು ತಯಾರಿಸಿ ಮಾರುವವನಾಗುವನು. ಅವನು ತನ್ನ ಕಾರಖಾನೆದಾರನು ತಾನೇ ಮಾರಾಟಗಾರನು ತಾನೇ ತನ್ನ ಬ್ಯಾಂಕರನು ತಾನೇ ತನ್ನ ವಿಮೆ ಇಳಿಸುವವನು ತಾನೇ. ಸಹಕಾರವು ಅವನ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವದಲ್ಲದೆ, ಅವನ ನೈತಿಕ ಮತ್ತು ಸಾಮಾಜಿಕ ಜೀವನದ ಮಟ್ಟವನ್ನು ಮೇಲಕ್ಕೆತ್ತಿದೆ. ಒಕ್ಕಲಿಗನ ವರ್ಗ

ಜೀವನವೂ, ಭಾವನೆಯೂ ವಿಕಸನಗೊಂಡಿವೆ. ಅವನು ಸ್ವಾವಲಂಬಿಯೂ ಮಿತವ್ಯಯಿಯೂ, ಆತ್ಮವಿಶ್ವಾಸಿಯೂ ಆಗಿರುವನು. ಸಮಾಜದ ಸಂಘದ ಗುಂಪಿನ ಹಿತಾಭಿವೃದ್ಧಿಯ ಮುಂದೆ ತನ್ನ ಹಿತವನ್ನೂ ಅಭಿವೃದ್ಧಿಯನ್ನೂ ಅಲ್ಲಗಳೆಯಲು ಕಲಿತಿರುವನು.

ನೆದರ್ಲಂಡಿನಲ್ಲಿಯ ಬೇರೆ ಬೇರೆ ಪ್ರಕಾರದ ಸಹಕಾರಿ ಸಂಘಗಳ ಕಾರ್ಯಕಲಾಪಗಳ ಆಡಳಿತೆಯ ವಿವರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ದೊರೆತ ಹಸ್ತಪತ್ರಿಕೆ ಪುಸ್ತಕ, ವರದಿಗಳ ಮೇಲಿಂದ, ಸಹಕಾರಿ ಸಂಘಗಳ ಆಡಳಿತೆಯ ವಿಷಯವನ್ನು ಇಲ್ಲಿ ಸಂಗ್ರಹಿಸಲಾಗಿದೆ. ಸಹಕಾರಿ ಸಂಘಗಳ ಕಾರ್ಯನಿರ್ವಹಣೆಯ ವಿಷಯದಲ್ಲಿ ಇಲ್ಲಿ ಮಾಡಿದ ನಿರೀಕ್ಷಣೆಯು, ಪರೀಕ್ಷಣೆಯು, ಅಲ್ಲಿಯ ಅಧಿಕಾರಿಗಳೊಡನೆ ಮತ್ತಿತರ ಸಭ್ಯಗ್ರಹಸ್ಥನೊಡನೆ ನಾನು ಸ್ವತಃ ಮಾಡಿದ ಚರ್ಚೆಯ ಮತ್ತು ವಿಚಾರ ವಿನಿಮಯದ ಮೇಲೆ ಅವಲಂಬಿಸಿದೆಯೆಂದು ಇಲ್ಲಿ ಹೇಳಬಯಸುವೆನು.

# ೪ ನೆದರ್ಲಂಡಿನಲ್ಲಿ ಒಕ್ಕಲುತನದ ಪತ್ತು

**ನೆದರ್ಲಂಡಿನಲ್ಲಿ ಅತಿ ಭದ್ರವಾಗಿರುವ ಒಕ್ಕಲುತನದ ಪತ್ತು ಒಕ್ಕಲಿಗರ ಬೇರೆ ಬೇರೆ ಪ್ರಕಾರದ ಸ್ಥಾನಿಕ ಸಂಸ್ಥೆಗಳ ವಿಕಾಸಕ್ಕೂ ಅಭಿವೃದ್ಧಿಗೂ ಹೊಣೆಯಾಗಿದೆ. ಹಳ್ಳಿಯಲ್ಲಿಯ ಸ್ಥಾನಿಕ ಬ್ಯಾಂಕು ಒಕ್ಕಲಿಗರ ಎಲ್ಲ ಬಗೆಯ ಆರ್ಥಿಕ ಚಟುವಟಿಕೆಗಳಿಗೆ ಕೇಂದ್ರಸ್ಥಳವಾಗಿದೆ.**

ಸುಮಾರು ಅರವತ್ತು ವರ್ಷಗಳ ಪೂರ್ವದಲ್ಲಿ ನೆದರ್ಲಂಡಿನಲ್ಲಿಯ ಒಕ್ಕಲಿಗರು ತಮಗೆ ಬೇಕಾದ ಸಾಲವನ್ನು ಸಾಹುಕಾರರಿಂದ ಪಡೆಯುತ್ತಿದ್ದರು ಈ ಸಾಹುಕಾರರೋ ಅವರಿಗೆ ಸಾಲ ಪೂರೈಸುವ ನೆವದಿಂದ ಹೊಲೆ ಬಡ್ಡಿಯನ್ನು ಆಕರಿಸಿ ಅವರನ್ನು ಪೂರ್ಣವಾಗಿ ಸುಲಿಯುತ್ತಿದ್ದರು. ೧೮೮೦ರ ಒಕ್ಕಲುತನದ ಗಂಡಾಂತರವು ಪರಿಸ್ಥಿತಿಯನ್ನು ಮತ್ತೂ ಹದಗೆಡಿಸಿತು. ಒಕ್ಕಲಿಗರೋ ಮೌನವಾಗಿ ಹೇಳತೀರದ ಸಂಕಟಗಳನ್ನು ಅನುಭವಿಸಬೇಕಾಯಿತು. ಜರ್ಮನಿಯಲ್ಲಿ ಒಕ್ಕಲಿಗರ ಸಂಕಟಗಳ ಪರಿಹಾರಕ್ಕಾಗಿ ರೈಫಿಸನ್ನನಿಂದ ಹೊರಡಿಸಲ್ಪಟ್ಟ ಪತ್ತಿನ ಬ್ಯಾಂಕುಗಳ ಯಶಸ್ಸನ್ನು ಮನಗಂಡ ಮುಖಂಡರು ನೆದರ್ಲಂಡಿನಲ್ಲಿಯ ಒಕ್ಕಲಿಗರ ಎಲ್ಲ ಬಗೆಯ ಆರ್ಥಿಕ ದುರವಸ್ಥೆಗೆ ಸಹಕಾರವೊಂದೇ ಒಂದು ಪರಿಹಾರವೆಂದೂ, ಮುಕ್ತಿಮಾರ್ಗವೆಂದೂ, ಅದನ್ನುಳಿದರೆ, ಇನ್ನಾವ ದಾರಿಯೇ ಇಲ್ಲವೆಂದೂ ಕಂಡುಕೊಂಡರು.

ಕ್ರಿಶ್ಚಿಯನ್ ತತ್ವಗಳ ತಳಹದಿಯ ಮೇಲೆ ರಚಿತವಾದ ನೆದರ್ಲಂಡಿನ ಒಕ್ಕಲಿಗರ ಯುನಿಯನ್ನು ಈ ವಿಷಯದಲ್ಲಿ ಮುಂದೆ ಬಂದಿತು. ಶಿಕ್ಷಕರೂ ಪಾದ್ರಿಗಳೂ ದೇಶವನ್ನೆಲ್ಲ, ವಿಶೇಷವಾಗಿ, ದಕ್ಷಿಣ ಭಾಗದಲ್ಲೆಲ್ಲ ಸುತ್ತಾಡಿ ಪತ್ತಿನ ಬ್ಯಾಂಕುಗಳ ಸ್ಥಾಪನೆಗೂ ಬೆಳವಣಿಗೆಗೂ ಪ್ರೋತ್ಸಾಹನವಿತ್ತರು. ಶೈಶವಾವಸ್ಥೆಯಲ್ಲಿಯೂ ಅವರು ಸಂಪಾದಿಸಿದ ಯಶಸ್ಸಿನಿಂದ ಪತ್ತಿನ ಚಳವಳಿಯ ಶೀಘ್ರ ಪ್ರಸಾರಕ್ಕೆ ಪ್ರೋತ್ಸಾಹನ ದೊರೆಯಿತು,

ಅದರಿಂದ ಸ್ಥಾನಿಕ ಒಕ್ಕಲುತನದ ಬ್ಯಾಂಕುಗಳೆಂದು ಅನೇಕ ಸಹಕಾರಿ ಪತ್ತಿನ ಸಂಘಗಳು ಅಸ್ತಿತ್ವದಲ್ಲಿ ಬಂದವು. ಆದರೆ ಅವುಗಳ ಪ್ರಗತಿಯು ಅಸಂಪೂರ್ಣವಾಗಿದ್ದಿತು. ೧೯೦೦ ನೇ ಇಸ್ವಿಯ ಪೂರ್ವದಲ್ಲಿ ಬರಿ ಅರವತ್ತು ಬ್ಯಾಂಕುಗಳಿದ್ದವು. ೧೯೨೯ರಲ್ಲಿ ಪ್ರತಿಯೊಂದು ಯೋಗ್ಯ ಹಳ್ಳಿಗೆ ಮತ್ತು ಪಟ್ಟಣಕ್ಕೆ ಒಂದೊಂದು ಸ್ಥಾನಿಕ ಸಂಸ್ಥೆಗಳು ಸ್ಥಾಪಿತವಾದವು.

ಆರಂಭದಲ್ಲಿ ಒಕ್ಕಲುತನದ ಬ್ಯಾಂಕಿಂಗ ವ್ಯವಹಾರಕ್ಕೆ ಧಕ್ಕೆ ತಗಲಿತು. ಯಾಕಂದರೆ ಸರಕಾರದ ಸಹಾಯವಿರಲಿಲ್ಲ. ಬ್ಯಾಂಕುಗಳ ಆಡಳಿತದ ವಿಷಯದಲ್ಲಿ ಜನತೆಯಲ್ಲಿ ಸಾಕಷ್ಟು ವಿಶ್ವಾಸವಿರಲಿಲ್ಲ- ಸಭಾಸದರು ಉತ್ಸಾಹದಿಂದ ಕೂಡಹಾಕಿದ ಹಣವು ಬೇಡಿಕೆಗಳನ್ನು ಪೂರೈಸುವಷ್ಟಿರಲಿಲ್ಲ. ಹೀಗಾಗಿ ಪ್ರಾಥಮಿಕ ಸಂಘಗಳಿಗೆ ಹಣದ ಸಹಾಯವೊದಗಿಸುವ, ಸಾವುಕಾರರ ಬ್ಯಾಂಕಾಗಿ ಪರಿಣಮಿಸುವ, ಬ್ಯಾಂಕುಗಳ ಆಡಳಿತದ ವಿಷಯದಲ್ಲಿ ಸಲಹೆ ಸೂಚನೆ ಕೊಟ್ಟು ಮಾರ್ಗದರ್ಶನ ಮಾಡುವ ಒಂದು ದೊಡ್ಡ ಕೇಂದ್ರ ಬ್ಯಾಂಕಿನ ಅವಶ್ಯಕತೆಯು ತಲೆದೋರಿತ್ತು.

ಅದಕಾಗಿ ಒಂದು ಕೇಂದ್ರ ಬ್ಯಾಂಕನ್ನು ಸ್ಥಾಪಿಸುವ ಕ್ರಮವು ಕೈಕೊಳ್ಳಲ್ಪಟ್ಟಿತು. ಆದರೆ ಮೂಲ ಒಕ್ಕಲಿಗರ ಸಂಸ್ಥೆಗಳ ಸಭಾಸದರಲ್ಲಿಯ ಭಿನ್ನಾಭಿಪ್ರಾಯದ ಮೂಲಕ, ಒಂದರ ಬದಲಾಗಿ, ಐಂದೊವ್ಹನ್ನದಲ್ಲಿ ಒಂದು ಮತ್ತು ಯುಟ್ರೆಚ್ಟಿನಲ್ಲಿ ಇನ್ನೊಂದು ಹೀಗೆ ಎರಡು ಬ್ಯಾಂಕುಗಳ ೧೮೯೮ರಲ್ಲಿ ಸ್ಥಾಪಿಸಲ್ಪಟ್ಟವು. ಯುಟ್ರೆಚ್ಟಿನಲ್ಲಿಯ ಕೇಂದ್ರ ಬ್ಯಾಂಕು-ಸಹಕಾರಿ ಸಂಘಗಳ ರಾಯಫೆಯಿಸನ್ನರು ಸಂಘಟಿಸಲ್ಪಟ್ಟ ಸ್ಥಾನಿಕ ಪತ್ತಿನ ಬ್ಯಾಂಕುಗಳನ್ನು ಸಭಾಸದರನ್ನಾಗಿ ಮಾಡಿಕೊಂಡು ಸಮಾವೇಶ ಮಾಡಿ, ಕೊಳ್ಳಲು ಒಪ್ಪಿಕೊಂಡಿತು. ಆದರೆ ಐಂದೋವ್ಹನ್ನಿನಲ್ಲಿಯ ಬ್ಯಾಂಕು ಇಂಥ ಬ್ಯಾಂಕುಗಳನ್ನು ಸಮಾವೇಶ ಮಾಡಿಕೊಳ್ಳುವದಲ್ಲದೆ, ಫ್ರೀ ಅಸೋಸಿಯೆಷನ್ನಿನ ಕಾಯಿದೆಯ ಕೆಳಗೆ ಅಸ್ತಿತ್ವದಲ್ಲಿ ಬಂದಿರುವ ಇತರ ಪತ್ತಿನ ಬ್ಯಾಂಕುಗಳನ್ನು ಸಭಾಸದರನ್ನಾಗಿ ಮಾಡಿಕೊಂಡಿತು. ಈ ಎರಡೂ ಬ್ಯಾಂಕುಗಳು ಒಟ್ಟಿಗೆ ಕೇಂದ್ರ ಸಹಕಾರಿ ಬ್ಯಾಂಕುಗಳಿದ್ದು, ಅವುಗಳ ಸದಸ್ಯತ್ವವನ್ನು ಪಡೆದ ಸಹಕಾರಿ ಸಂಘಗಳು ಅವುಗಳ ಶೇರು(ಪಾಲು) ಗಳನ್ನು ಕೊಳ್ಳಬೇಕಾಗುವದು.

# ಸಾಲದ (ಪತ್ತಿನ) ಬ್ಯಾಂಕುಗಳು.

ಸ್ಥಾನಿಕ ಸಹಕಾರಿ ಬ್ಯಾಂಕುಗಳು ಸ್ವಯಂಪ್ರೇರಿತವೂ ಸ್ವತಂತ್ರವೂ ಆಗಿದ್ದು ೧೮೫೫ರ ಫ್ರೀ ಅಸೋಸಿಯೇಶನ್ ಆ್ಯಕ್ಟಿನನ್ವಯ ಅಥವಾ ೧೮೭೬ರ ಸಹಕಾರಿ ಸಂಘಗಳ ಕಾಯದೆಯನ್ವಯ (೧೯೨೫ರ ತಿದ್ದುಪಡೆಯಾದ ಕಾಯದೆಯನ್ವಯ) ನೊಂದಿಸಲ್ಪಟ್ಟಿರುತ್ತವೆ. ರೋಮನ್ ಕ್ಯಾಥೋಲಿಕ್ಕರು ಬಹುಸಂಖ್ಯಾಕರಾಗಿರುವ ದಕ್ಷಿಣ ಭಾಗವಲ್ಲಿಯ ಬಹುತರ ಎಲ್ಲ ಸಾಲದ ಬ್ಯಾಂಕುಗಳು ೧೮೫೫ರ ಕಾಯದೆಯನ್ವಯ ನೋಂದಿಸಲ್ಪಟ್ಟಿರುತ್ತವೆ. ಸರಕಾರದ ನಿಯಂತ್ರಣದಿಂದ ಅವು ಸ್ವತಂತ್ರವಾಗಿರುವವು. ನಮ್ಮ ದೇಶದಲ್ಲಿಯ ಸಹಕಾರಿ ಸಂಘಗಳು ಸರಕಾರದಿಂದ ಸವಲತ್ತುಗಳನ್ನೂ ಸೌಕರ್ಯಗಳನ್ನೂ ಪಡೆಯುವಹಾಗೆ ಇಲ್ಲಿಯ ಸಹಕಾರಿ ಸಂಘಗಳು ಯಾವದೇ ಬಗೆಯ ಸವಲತ್ತು ಸೌಕರ್ಯಗಳನ್ನು ಪಡೆಯುವದಿಲ್ಲ.

ಸ್ಥಾನಿಕ ಬ್ಯಾಂಕುಗಳು ತಮ್ಮ ನಿಯಮಿತ ಕಾರ್ಯಕ್ಷೇತ್ರದಿಂದ, ಅನಿಯಮಿತ ಹೊಣೆಗಾರಿಕೆಯಿಂದ, ಅಡಚಣಿ, ಸಾಲತೀರಿಸುವ ಶಕ್ತಿಗಳ ಮೇಲೆ ಉತ್ಪಾದನೆಯ ಉದ್ದೇಶಗಳಿಗಾಗಿ ಕೊಡಲ್ಪಡುವ ಸಾಲದ ವ್ಯವಹಾರದಿಂದ, ಉಚಿತ ಆಡಳಿತೆಯಿಂದ, ಬಂದ ಲಾಭವನ್ನೆಲ್ಲ ಕಾಯ್ದಿಟ್ಟ ನಿಧಿಗೆ ಕೂಡಿಸಿ ಸಂಘದ ಪರಿಸ್ಥಿತಿಯನ್ನು ಭದ್ರಗೊಳಿಸುವ ಏರ್ಪಾಡಿನಿಂದ, ಮಿತವ್ಯಯ ಸ್ವಾವಲಂಬನೆಯ ಚಟಗಳನ್ನು ಅಳವಡಿಸಿಕೊಳ್ಳುವದರಿಂದ, ಬಲವಾದ ಸಾಮಾಜಿಕ ಭಾವನೆ ಸಮವರ್ಗದ ಕಲ್ಪನೆಗಳನ್ನು ವಿಕಸಿತಗೊಳಿಸುವದರಿಂದ, ಆರ್ಥಿಕ ದೃಷ್ಟಿಯಿಂದ ವಜ್ರಸಮವಾಗಿವೆ. ಆಡಳಿತೆಯ ದೃಷ್ಟಿಯಿಂದ ಸುವ್ಯವಸ್ಥೆಯ ಪ್ರತೀಕವಾಗಿವೆ. ನಮ್ಮ ಭಾರತದಲ್ಲಿ ಕಂಡುಬರುವ 'ಶೇರು'ಗಳ ಪದ್ಧತಿಯು ಇಲ್ಲಿಲ್ಲ. ಆದರೆ ಸಭಾಸದರು ತಮ್ಮ ಉಳಿತಾಯದ ಹಣವನ್ನೆಲ್ಲ ಬ್ಯಾಂಕುಗಳಲ್ಲಿ ಠೇವಾಗಿಡುವರು. ಸಭಾಸದರಾಗುವ ಪ್ರತಿಯೊಬ್ಬನು ಹೀಗೆ ಉಳಿತಾಯದ ಹಣವನ್ನು ಬ್ಯಾಂಕಿನಲ್ಲಿಡಲೇಬೇಕೆಂಬ ನಿರ್ಬಂಧವಾಗಲೀ ನಿಷ್ಠುರತೆಯಾಗಲೀ ಇಲ್ಲಿ ಇಲ್ಲ. ಈ ಸ್ಥಾನಿಕ ಬ್ಯಾಂಕುಗಳು ತಮ್ಮ ಅನಿಯಮಿತ ಹೊಣೆಗಾರಿಕೆಯ ಬಲದಿಂದ ಸಾಲವನ್ನೆತ್ತುವವು. ನಿಧಿಗಳನ್ನು ಕಲೆಹಾಕುವವು. ಇಲ್ಲಿಯ ಸದಸ್ಯರು ಅನಿಯಮಿತ ಹೊಣೆಗಾರಿಕೆಯ ಅರ್ಥವನ್ನು ಸರಿಯಾಗಿ ಮಾಡಿಕೊಂಡಿರುವರು. ಮತ್ತದನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಿಕೊಂಡು ಹೋಗಲಿಕ್ಕೆ ಪರಸ್ಪರರಲ್ಲಿ ನಿಕಟಸಂಬಂಧವನ್ನು ಪರಿಚಯವನ್ನು ಇಟ್ಟುಕೊಂಡಿರುವರು.

ಸ್ಥಾನಿಕ ಬ್ಯಾಂಕುಗಳ ಪ್ರಗತಿ ವಿಕಾಸಕ್ಕಾಗಿ, ಅವುಗಳ ಸುವ್ಯವಸ್ಥಿತ ಆಡಳಿತಕ್ಕಾಗಿ ಅವರು ಮನಃಪೂರ್ವಕವಾಗಿ ಬೇಕಾಗುವಷ್ಟು ಸಾಕಷ್ಟು ಆಸಕ್ತಿಯನ್ನು ವಹಿಸುವರು. ವರ್ಷಕ್ಕೊಮ್ಮೆ ಜರುಗುವ (ವಾರ್ಷಿಕ) ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಡುವ ಐದರಿಂದ ಏಳು ಜನರ ವರೆಗೆ ರಚಿತವಾದ ವ್ಯವಸ್ಥಾಪಕ ಸಮಿತಿಯು ಇವುಗಳ ಕಾರ್ಯಕಲಾಪಗಳನ್ನು ಆಡಳಿತೆಯನ್ನು ನೋಡಿಕೊಳ್ಳುವದು, ಸರ್ವಸಾಧಾರಣ ಸಭೆಯೇ ಇಲ್ಲಿ ಅಗ್ರಾಧಿಕಾರಿ! ಸುಶಿಕ್ಷಿತರೂ, ಸಮರ್ಥರೂ ಆದ 'ಕ್ಯಾಶಿಯರ್' ಅಂದರೆ ಖಜಾನದಾರರು ದಿನದಿನದ ಹಣದ ಎಲ್ಲ ವ್ಯವಹಾರವನ್ನು ನೋಡಿಕೊಳ್ಳುವರು. ಅಲ್ಲದೆ ಇವರು ವಾಡಿಕೆಯಾಗಿ ವರ್ಣಸ್ಸುಳ್ಳವರೂ ಇರುವರು.

ಈ ದೇಶದಲ್ಲಿ ಸುಮಾರು ೧೩೦೦ ಸ್ಥಾನಿಕ ಬ್ಯಾಂಕುಗಳಿವೆ. ಒಂದೊಂದು ಹಳ್ಳಿಯಲ್ಲಿ ಒಂದಕ್ಕಿಂತ ಹೆಚ್ಚು ಸ್ಥಾನಿಕ ಬ್ಯಾಂಕುಗಳಿದ್ದು, ಒಂದು ರೋಮನ್ ಕ್ಯಾಥೋಲಿಕ್ ಜನರಿಗೂ ಇನ್ನುಳಿದವು ಬಿನ್‌ರೋಮನ್ ಕ್ಯಾಥೋಲಿಕ್ ಜನರಿಗೂ ಸಂಬಂಧಿಸಿರುವವು.

ಐಂಡೋವ್ಹೆನ್ನಿನಲ್ಲಿರುವ ಕೇಂದ್ರ ಬ್ಯಾಂಕಿಗೆ ರೋಮನ್ ಕ್ಯಾಥೋಲಿಕ್ ಬ್ಯಾಂಕುಗಳು ಸಮಾವೇಶವಾಗಿದ್ದರೆ, ಉಳಿದ ಬಿನ್‌ರೋಮನ್-ಕ್ಯಾಥೋಲಿಕ್ ಬ್ಯಾಂಕುಗಳು ಯುಟ್ರೆಚಟ್ಟಿನಲ್ಲಿರುವ ಕೇಂದ್ರ ಬ್ಯಾಂಕಿಗೆ ಸಮಾವೇಶವಾಗಿರುವವು. ಸುಮಾರು ಒಂಬತ್ತು ಬ್ಯಾಂಕುಗಳನ್ನು ಬಿಟ್ಟರೆ, ದೇಶದಲ್ಲಿಯ ಎಲ್ಲ ಬ್ಯಾಂಕುಗಳು ಒಂದಿಲ್ಲೊಂದು ಕೇಂದ್ರ ಬ್ಯಾಂಕಿಗೆ ಸಮಾವೇಶವಾಗಿರುವವು. ಯುಟ್ರೆಚಟ್ಟಿನಲ್ಲಿರುವ ಕೇಂದ್ರ ಬ್ಯಾಂಕಿಗೆ ಸದಸ್ಯರಾಗಿ ಸಮಾವೇಶವಾಗಿರುವ, ದೇಶದ ಪಶ್ಚಿಮ ಉತ್ತರ ಮತ್ತು ಮಧ್ಯಭಾಗದಲ್ಲಿರುವ ಸ್ಥಾನಿಕ ಬ್ಯಾಂಕುಗಳು ಬಹುತರವಾಗಿ ಬಿನ್ ಕ್ಯಾಥೋಲಿಕ್ ಜನರದಿರುವವು. ಅದರಂತೆಯೇ ಐಂಡೋವ್ಹೆನ್ನಿನಲ್ಲಿಯ ಕೇಂದ್ರ ಬ್ಯಾಂಕಿಗೆ ಸದಸ್ಯರಾಗಿರುವ ಎಲ್ಲ ಬ್ಯಾಂಕುಗಳು, ದೇಶದ ದಕ್ಷಿಣ ಭಾಗದಲ್ಲಿಯ ಕ್ಯಾಥೋಲಿಕ್ ಬ್ಯಾಂಕುಗಳಾಗಿವೆ. ಐಂಡೋವ್ಹೆನ್ನಿನಲ್ಲಿಯ ಕೇಂದ್ರ ಬ್ಯಾಂಕಿಗೆ ಸಮಾವೇಶವಾದ ಬ್ಯಾಂಕುಗಳು ಕ್ರಿಶ್ಚಿಯನ್ ಧೋರಣವನ್ನನುಸರಿಸಿ ಒಕ್ಕಲಿಗರಿಗಷ್ಟೇ ಸಾಲಕೊಡುತ್ತಿದ್ದರೆ, ಯುಟ್ರೆಚಟ್ಟಿನಲ್ಲಿಯ ಕೇಂದ್ರ ಬ್ಯಾಂಕಿಗೆ ಸಮಾವೇಶವಾದ ಒಕ್ಕಲುತನದ ಸಾಲದ ಬ್ಯಾಂಕುಗಳು ಪಟ್ಟಣದ ಬ್ಯಾಂಕುಗಳಂತೆ ಕಾರ್ಯಸಾಗಿಸಿ, ಸಣ್ಣ ಸಣ್ಣ ವ್ಯಾಪಾರಸ್ಥರಿಗೆ ಔದ್ಯೋಗಿಕ ವ್ಯವಹಾರಿಗಳಿಗೆ ಮತ್ತಿತರ ದುಡಿಯುವ ಜನರಿಗೆ ಸಾಲವನ್ನು ಪೂರೈಸುತ್ತವೆ.

## ಸಾಲ ಪೂರೈಕೆ

ಸಾಲದ ಬ್ಯಾಂಕುಗಳು, ಒಕ್ಕಲಿಗರಿಗೆ ಒಬ್ಬರ ಅಥವಾ ಇಬ್ಬರ ವೈಯಕ್ತಿಕ ಜಾಮೀನಿನ ಮೇಲೆ, ಸಣ್ಣ, ಮಾಧ್ಯಮಿಕ ಅವರಂತೆಯೇ ದೊಡ್ಡ ಮುದ್ದತಿನ ಸಾಲಗಳನ್ನು ಪೂರೈಸುವವು. ಸಾಲಕೊಡುವ ಪೂರ್ವದಲ್ಲಿ ಜಾಮೀನದಾರರ ಸಾಲ ತೀರಿಸುವ ಶಕ್ತಿಯನ್ನು ಕಾಳಜೀಪೂರ್ವಕ ಪರೀಕ್ಷಿಸುವವು. ಮತ್ತು ಸ್ಥಾವರ ಆಸ್ತಿಯನ್ನು ಹೆಚ್ಚಿನ ಭದ್ರತೆಗಾಗಿ ಅಡವಾಗಿ ಅಥವಾ ಒತ್ತಿ ಇಟ್ಟುಕೊಳ್ಳುವವು. ದೊಡ್ಡ ಮುದ್ದತಿನ ಸಾಲಗಳನ್ನು ಕೊಡುವದಾದರೆ. ವಾರ್ಷಿಕ ಕಂತುಗಳಿಂದ ಇಪ್ಪತ್ತು ವರ್ಷಗಳ ಪರಮಾವಧಿಯ ವರೆಗೆ ಹೊಲ, ತೋಟ, ಮೊದಲಾದವುಗಳ ಖರೀದಿಯ ಸಲುವಾಗಿ ಕೊಡುತ್ತವೆ. ಈ ಸಾಲಗಳ ಹೆಚ್ಚಿನ ಭದ್ರತೆಯ ಸಲುವಾಗಿ ಮತ್ತೆ ಕೆಲವೊಂದು ಆಸ್ತಿಯನ್ನು ಒತ್ತಿ ಬರೆಯಿಸಿಕೊಳ್ಳುವವು. ಕೇಂದ್ರಸಾಲ ಪೂರೈಸುವ ಬ್ಯಾಂಕುಗಳು ಸಾಲವಸೂಲಿಯ ಬಗೆಗೆ ಅತಿ ದಕ್ಷ ಮತ್ತು ನಿಯಮಿತ ಕ್ರಮವನ್ನು ಕೈಕೊಳ್ಳುವವು. ಪರಿಣಾಮವಾಗಿ ಮುದ್ದತು ಮೀರಿದ ಬಾಕಿಗಳು ತೀರ ವಿರಳ. ಸ್ಥಾನಿಕ ಬ್ಯಾಂಕುಗಳ ಅಧಿಕಾರಿಗಳಿಗೆ ಬರತಕ್ಕ ಸಾಲಬಾಕಿಯ ವಸೂಲಿಯ ಪ್ರಶ್ನೆಯೆಂದರೆ ಒಂದು ಸಮಸ್ಯೆಯಾಗಿಲ್ಲ. ಈ ಮೇರೆಗೆ, ವಾರ್ಷಿಕ ಕಂತುಗಳಿಂದ ಇಪ್ಪತ್ತು ವರ್ಷಗಳ ಪರಮಾವಧಿಯ ವರೆಗೆ ನೂರಕ್ಕೆ ವರ್ಷಕ್ಕೆ ಐದಕ್ಕಿಂತ ಮಿಗದ ಬಡ್ಡಿಯಿಂದ ಪತ್ತಿನ ಸಹಕಾರಿ ಸಂಘಗಳು ಒಕ್ಕಲಿಗರ ಎಲ್ಲಬಗೆಯ ಸಾಲದ ಅಡಚಣಿಗಳನ್ನು ಪೂರೈಸಲಿಕ್ಕೆ ಸಾಲಕೊಡುವ ಏರ್ಪಾಡು ಮಾಡಿವೆ.

ಐಂದೋವ್ರೆನ್ನಿನಲ್ಲಿಯ ಒಕ್ಕಲಿಗರ ಜಮೀನ ಒತ್ತೀ ಬ್ಯಾಂಕು-ಇಪ್ಪತ್ತು ವರ್ಷಗಳಿಗಿಂತ ಮಿಕ್ಕ ನಾಲ್ವತ್ತು ವರ್ಷಗಳ ಪರಮಾವಧಿಯವರೆಗೆ ದೀರ್ಘ ಅವಧಿಯ ಸಾಲಗಳನ್ನು, ಒತ್ತಿಯ ಮೇಲೆ ಪೂರೈಸುವದು. ಈ ಉದ್ದೇಶಗಳನ್ನು ಈಡೇರಿಸುವ ಸಲುವಾಗಿ ಕರಬಿಗಳನ್ನು ಹೊರಡಿಸಿ, ಅವಶ್ಯವಿರುವ ನಿಧಿಯನ್ನು ಕಲೆಹಾಕುವದು. ಈ ಜಮೀನ ಒತ್ತೆಯ ಬ್ಯಾಂಕು ಸಹಕಾರಿ ಸಂಘಗಳ ಕಾಯದೆಯನ್ವಯ ನೋಂದಿಸಲ್ಪಟ್ಟಿಲ್ಲ. ಆದರೂ ಒಕ್ಕಲಿಗರ ಎಲ್ಲಸಾಲದ ಬ್ಯಾಂಕುಗಳೂ ಮತ್ತು ಕೇಂದ್ರ ಬ್ಯಾಂಕುಗಳೂ ಅದರ ಸದಸ್ಯತ್ವವನ್ನು ಪಡೆದಿರುವವು. ಕೇಂದ್ರ ಬ್ಯಾಂಕು ತನ್ನ ದೀರ್ಘ ಅವಧಿಯ ಸಾಲದ ವಿಭಾಗದಿಂದ ವ್ಯವಹಾರಿಕವಾಗಿ ಈ ಬ್ಯಾಂಕಿನ ವ್ಯವಸ್ಥೆಯನ್ನು ನೋಡಿಕೊಳ್ಳುತ್ತದೆ.

ಇಪ್ಪತ್ತು ವರ್ಷಗಳ ಅವಧಿಯ ದೀರ್ಘ ಮುದ್ದತಿನ ಸಾಲಗಳನ್ನು ಒಕ್ಕಲಿಗರ ಸಹಕಾರಿ ಸಂಘಗಳಿಗೆ ಪೂರೈಸುವ ಉದ್ದೇಶದಿಂದ ಯುಟ್ರೆಚ್‌ಟ್ಟಿನಲ್ಲಿ ಒಂದು ಜಮೀನು ಬಂಡವಾಳ ಬ್ಯಾಂಕು ಸ್ಥಾಪಿತವಾಗಿದೆ. ೪೪೦ ಸ್ಥಾನಿಕ ಬ್ಯಾಂಕುಗಳು ಅದರ ಸಭಾಸದತ್ವವನ್ನು ವಹಿಸಿದ್ದು, ಕೇಂದ್ರ ಬ್ಯಾಂಕು ಅದರ ಆಡಳಿತೆಯನ್ನು ನೋಡಿಕೊಳ್ಳುತ್ತದೆ. ದೀರ್ಘಮುದ್ದತಿನ ಸಾಲಗಳನ್ನು ಪೂರೈಸುವ ಇನ್ನಿತರ ಖಾಸಗಿ ಒಕ್ಕಲುತನದ ಒತ್ತೆಯ ಸಂಸ್ಥೆಗಳೂ ಉಂಟು. ಈ ಮೇರೆಗೆ ಸಹಕಾರಿ ಸಂಸ್ಥೆಗಳು ಇಪ್ಪತ್ತು ವರ್ಷಗಳಿಗಿಂತ ಹೆಚ್ಚಲ್ಲದ ಅವಧಿಯ ವರೆಗೆ ಒಕ್ಕಲುತನದ ಆವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಸಾಲ ಪೂರೈಸುತ್ತಿದ್ದರೆ, ಇಪ್ಪತ್ತು ವರ್ಷಗಳಿಗಿಂತ ಹೆಚ್ಚಿನ ಅವಧಿಯ ಸಾಲಗಳನ್ನು ಸಹಕಾರಿ ಸಂಸ್ಥೆಗಳಲ್ಲದ ಒಕ್ಕಲುತನದ ಒತ್ತೆಯ ಬ್ಯಾಂಕುಗಳು ಪೂರೈಸುವವು. ಕೆಲಕೆಲ ಸಹಕಾರಿ ಸಂಸ್ಥೆಗಳೂ ಇಂಥ ಬ್ಯಾಂಕುಗಳ ಸದಸ್ಯತ್ವವನ್ನು ವಹಿಸಿರುವವು.

## ಒಕ್ಕಲುತನದ ಸಾಲ

ಒಕ್ಕಲುತನದ ಸಾಲದ ಬ್ಯಾಂಕುಗಳು, ಖರೀದಿ ವಿಕ್ರಿ ಸಂಘ, ತತ್ತಿ ಕಾಯಿಪಲ್ಲೆಗಳನ್ನು ಲಿಲಾವು ಮಾಡುವ ಸಂಘ, ಹೈನದ ಕಾರಖಾನೆ, ಸಹಕಾರಿ ಕಟುಕರ ಸಂಸ್ಥೆ, ಉಪಕರಣಗಳ ಸಂಘ ಈ ಮೊದಲಾದ ಸ್ಥಾನಿಕ ಒಕ್ಕಲಿಗರ ಸಹಕಾರಿ ಸಂಘಗಳಿಗೆ ಸಾಲವನ್ನು ಪೂರೈಸುತ್ತವೆ. ಒಕ್ಕಲುತನದ ಬೆಳೆಗಳ ಹುಟ್ಟುವಳಿಯು ರಾಶಿಯಾದ ಮೇಲೆ ಪೇಟೆಯಲ್ಲಿ ಹುಟ್ಟುವಳಿಯ ಅತಿಪೂರೈಕೆಯ ಗಜಿಬಿಜಿಯನ್ನು ತಡೆಯಲಿಕ್ಕೆ ಮತ್ತು ಯೋಗ್ಯ ಬೆಲೆಯನ್ನು ಸಂಪಾದಿಸಲಿಕ್ಕೆ ಒಕ್ಕಲಿಗರೂ, ಸಹಕಾರಿ ಸಂಘಗಳೂ ಕೂಡಿಯೇ ಹುಟ್ಟುವಳಿಯನ್ನು ಸಂಗ್ರಹಿಸುವರು. ಈ ಹುಟ್ಟುವಳಿಯ ಮೇಲೆ ಸ್ಥಾನಿಕ ಒಕ್ಕಲುತನದ ಬ್ಯಾಂಕಗಳು ಸಾಲ ಕೊಡುವವು. ನೀರಿನ ಕಾಲುವೆ, ಭೂಸುಧಾರಣೆ, ಕಳೆದುಕೊಂಡ ಹೊಲವನ್ನು ತಿರುಗಿ ಸಂಪಾದಿಸುವದು ಸಾಗುವಳಿಯಾಗಬಹುದಾದ ಜಮೀನಿಗೆ ಯುದ್ಧದಿಂದುಂಟಾದ ನಷ್ಟದ ತಿದ್ದುಪಡಿ ಈ ಮೊದಲಾದ ಬಹುದೊಡ್ಡ ಕಾರ್ಯಗಳಿಗೆ ತಗಲುವ ವೆಚ್ಚದಲ್ಲಿ ಸರಕಾರದವರ ಧನಸಹಾಯವನ್ನುಳಿದು ಇತರ ಹಣಕ್ಕಾಗಿ ಒಕ್ಕಲುತನದ ಸಾಲದ ಬ್ಯಾಂಕಗಳು ಸಾಲ ಪೂರೈಸುವವು.

ಸಾಲದ ಬ್ಯಾಂಕುಗಳು ಇಂದು ಸಾಲದ ಬ್ಯಾಂಕುಗಳಾಗದೆ ಉಳಿತಾಯದ ಬ್ಯಾಂಕುಗಳಾಗಿ ಪರಿಣಮಿಸಿವೆ. ಯುದ್ಧಕಾಲದಿಂದ ಹಳ್ಳಿಯ ಜನರು ವಿಶೇಷವಾಗಿ ಒಕ್ಕಲಿಗರು ಮತ್ತು ತೋಟಿಗರು ನಿರೀಕ್ಷಣೆ ಮೀರಿ ಉಳಿತಾಯ ಮಾಡಿರುವರು. ಇಂಥ ಹಳ್ಳಿಗರ ಮಿತಿಮೀರಿದ ಉಳಿತಾಯದ ಹಣವನ್ನು ಕೂಡಹಾಕುವಲ್ಲಿ, ಕಾಯ್ದಿಡುವಲ್ಲಿ ಸ್ಥಾನಿಕ ಬ್ಯಾಂಕುಗಳು ಬಹು ಮಹತ್ವದ ಪಾತ್ರವನ್ನು ವಹಿಸಿವೆ. ೧೯೪೫ ಇ. ಕೊನೆಗೆ, ಒಕ್ಕಲುತನದ ಬ್ಯಾಂಕುಗಳಿಗೆ ಉಳಿತಾಯದ ಹಣವೆಂದು ಜಮೆಯಾದ ಹಣವು ೨,೫೦೦,೦೦೦೦೦೦ ರೂಪಾಯಿಗಳಿಗೂ ಮೀರಿದೆ. ಈ ಮೇರೆಗೆ ಈ ಬ್ಯಾಂಕುಗಳು ಉಳಿತಾಯದ ಬ್ಯಾಂಕುಗಳೆಂದು ಪ್ರಸಿದ್ಧಿ ಪಡೆದಿವೆ. ಈ ರೀತಿ ಬ್ಯಾಂಕುಗಳಲ್ಲಿ ಉಳಿತಾಯದ ಹಣವನ್ನಿಡುವವರು ಬರಿ ಒಕ್ಕಲಿಗರಷ್ಟೇ ಅಲ್ಲ, ಸಾರ್ವಜನಿಕ ಇತರ ಸಭಾಸದರೂ ಇರುವರು. ಪ್ರಪಂಚದಲ್ಲಿ ಉಳಿಸಿ ಸ್ಥಾನಿಕ ಬ್ಯಾಂಕುಗಳಲ್ಲಿ ಉಳಿತಾಯದ ಹಣವನ್ನು ಇಡಲಿಕ್ಕೆ ಜನರಿಗೆ ಪ್ರೋತ್ಸಾಹನಕೊಡುವ ದೃಷ್ಟಿಯಿಂದ, ಕೇಂದ್ರ ಬ್ಯಾಂಕುಗಳು ಒಳಹೊರಗೂ ಕೂಡಿಯೇ ಕಲ್ಪನೆ ಮೀರಿ ಪ್ರಚಾರ ಮಾಡುತ್ತವೆ. ನಮ್ಮ ಮುಂಬಯಿ ಸಂಸ್ಥಾನದಲ್ಲಿಯ ಸಣ್ಣ ಪಟ್ಟಣದಲ್ಲಿಯ ಮಧ್ಯಮ ತರಗತಿಯ ಅರ್ಬನ್ ಕೋಆಪರೇಟಿವ್ಹ ಬ್ಯಾಂಕಿನ ಅಂದರೆ ಪಟ್ಟಣ ಸಹಕಾರಿ ಬ್ಯಾಂಕಿನ ಪ್ರಮಾಣದಷ್ಟು ಈ ಸ್ಥಾನಿಕ ಬ್ಯಾಂಕುಗಳಿರುತ್ತವೆ. ಈ ಬ್ಯಾಂಕುಗಳು ತಮ್ಮ ದುಡಿಯುವ ಬಂಡವಾಳದಲ್ಲಿ ನೂರಕ್ಕೆ ೬೫ ರಿಂದ ೭೦ರ ವರೆಗೆ ಹಣವನ್ನು ಒಕ್ಕಲಿಗರಿಗೂ, ಸ್ಥಾನಿಕ ಸಹಕಾರಿ ಸಂಘಗಳಿಗೂ ಸಾಲ ಕೊಡುತ್ತವೆ. ಇನ್ನುಳಿದ ೩೫ರಿಂದ ೩೦ರ ವರೆಗಿನ ಹಣವನ್ನು ಕೇಂದ್ರ ಬ್ಯಾಂಕುಗಳ ಠೇವು (ಇಡುಗಂಟು) ಗಳ ರೂಪದಿಂದ ಇಡುವಲ್ಲಿ ಸರಕಾರದ ಸೆಕ್ಯೂರಿಟಿ ( ಜಿಮ್ಮೆ )ಗಳನ್ನು ಕೊಳ್ಳುವಲ್ಲಿ ವಿನಿಯೋಗಿಸುತ್ತವೆ. ಐಂದೊವ್ಹೆನ್ನಿನಲ್ಲಿರುವ ಕೇಂದ್ರ ಬ್ಯಾಂಕಿನಲ್ಲಿ ೭೭೭ ಸ್ಥಾನಿಕ ಸಾಲದ ಬ್ಯಾಂಕುಗಳು ಇಟ್ಟ ಠೇವಿನ ಹಣವು ೧೯೩೨ ರಲ್ಲಿ ೫೬೦,೦೦೦,೦೦೦ ರೂಪಾಯಿಗಳಿಗೂ ಮೀರಿದ್ದಿತು. ಅದರಂತೆಯೇ ಯುಟ್ರೆಚಿಟ್ಟ ಕೇಂದ್ರ ಬ್ಯಾಂಕಿನಲ್ಲಿ ೭೨೨ ಸಾಲದ ಬ್ಯಾಂಕುಗಳು ಇಟ್ಟ ಹಣವು ೨೭೦,೦೦೦,೦೦೦ ರೂಪಾಯಿಗಳವರೆಗೇರಿತು.

# ಬಡ್ಡಿಯ ದರ

ಒಕ್ಕಲುತನದ ಬ್ಯಾಂಕುಗಳಲ್ಲಿ ಉಳಿತಾಯದ ಖಾತೆಯ ಮೇಲಿನ ಬಡ್ಡಿಯ ದರವು ಸದಸ್ಯರಿಗಾಗಿ ನೂರಕ್ಕೆ ೩ ರಂತೆ ಇದ್ದರೆ ಸದಸ್ಯರಲ್ಲದ ಜನರಿಗೆ ನೂರಕ್ಕೆ ೨॥ ರಂತಿರುವದು. ಕೇಂದ್ರ ಬ್ಯಾಂಕುಗಳು ಸ್ಥಾನಿಕ ಬ್ಯಾಂಕುಗಳಿಗೆ ಕೊಡುವ ಬಡ್ಡಿಯು ಆಡಳಿತೆಯ ವೆಚ್ಚವನ್ನು ನೀಗಿಸಿಕೊಂಡು ಹೋಗುವ ಹಾಗೆ ತುಸು ಹೆಚ್ಚಿನ ದರದ್ದಿರುವದು. ಕೇಂದ್ರ ಬ್ಯಾಂಕುಗಳು ಸರಕಾರಿ–ಅರ್ಧಸರಕಾರಿ ಸಂಸ್ಥೆಗಳಲ್ಲಿತೊಡಕಿಸಿದ ಹಣದಿಂದ ಇಟ್ಟ ಠೇವುಗಳ ಮೇಲೆ ಬರುವ ಬಡ್ಡಿಯಿಂದ, ಸ್ಥಾನಿಕ ಬ್ಯಾಂಕುಗಳು ತಮ್ಮ ಸಭಾಸದರಿಗೆ ಕೊಟ್ಟ ಸಾಲದ ಮೇಲೆ ಬರುವ ಬಡ್ಡಿಗಿಂತ ಹೆಚ್ಚು ಉತ್ಪನ್ನವನ್ನು ಲಾಭವನ್ನು ಪಡೆಯುತ್ತವೆ. ಈ ಠೇವುಗಳ ಜೊತೆಗೆ ಸ್ಥಾನಿಕ ಬ್ಯಾಂಕುಗಳು ವ್ಯವಹಾರದಲ್ಲಿ ಉಪಯೋಗಿಸಬಹುದಾದ ಹೆಚ್ಚಿನ ನಿಧಿಗಳನ್ನು ಚಾಲತಿ ಠೇವುಗಳನ್ನೂ ಸ್ವೀಕರಿಸುತ್ತವೆ. ಕೇಂದ್ರ ಬ್ಯಾಂಕುಗಳಲ್ಲಿ ಈ ರೀತಿ ಕೂಡಬೇಕುವ ನಿಧಿಗಳಿಂದ, ಹಣದ ಮತ್ತು ಬಂಡವಾಳದ ಪೇಟೆಗಳಲ್ಲಿ. ಅವು ಬಹು ಮಹತ್ವದ ಸಂಸ್ಥೆಗಳೆಂದು ಪರಿಗಣಿತವಾಗಿವೆ.

ಕೇಂದ್ರ ಬ್ಯಾಂಕುಗಳು ನಂತರ ಸರಕಾರದ ಸೆಕ್ಯುರಿಟಿಗಳಲ್ಲಿ (ಜಿನ್ನಸು-ಗಳಲ್ಲಿ) ತಮ್ಮಲ್ಲಿ ಕೂಡಬಿದ್ದ ನಿಧಿಗಳನ್ನು ತೊಡಕಿಸುವ ವ್ಯವಸ್ಥೆ ಮಾಡುತ್ತವೆ.

ಆರ್ಥಿಕ ದೃಷ್ಟಿಯಿಂದ ಅಸಮ ಅಥವಾ ವಿಷಮ ಪರಿಸ್ಥಿತಿಗಳಿಂದ ಒಂದೂ ಸಹಕಾರ ಸಂಸ್ಥೆಯಿಲ್ಲ. ಯಾವದೇ ಒಂದು ಸಾಲದ ಬ್ಯಾಂಕು ಈ ರೀತಿ ನಿಕೃಷ್ಟ ಪರಿಸ್ಥಿತಿಗೀಡುದಾದರೆ, ಅದನ್ನು ಕೂಡಲೇ ಇನ್ನೊಂದು ಬ್ಯಾಂಕಿಗೆ ಕೂಡಿಸುವ ವ್ಯವಸ್ಥೆ ಮಾಡಲಾಗುವದು.

ದೇಶದ ಆರ್ಥಿಕ ಪದ್ಧತಿಯಲ್ಲಿ ಈ ಸಾಲದ ಬ್ಯಾಂಕುಗಳು ಅನಿವಾರ್ಯವಾಗಿ ಒಂದು ಸರಪಳಿಯಾಗಿ ಬಹು ಮಹತ್ವದ ಸಂಸ್ಥೆಗಳಾಗಿ ಪರಿಣಮಿಸಿವೆ.

ನಮ್ಮ ಭಾರತ ದೇಶದಲ್ಲಿ ಪತ್ತಿನ ಸಂಘಗಳು ತಮ್ಮ ಸಾಲದ ಸಹಾಯಕ್ಕಾಗಿ ಕೇಂದ್ರ ಬ್ಯಾಂಕುಗಳ ಮೇಲೆ ಅವಲಂಬಿಸುತ್ತಿದ್ದರೆ, ನೆದರ್ಲಂಡಿನಲ್ಲಿಯ ಸಾಲದ ಬ್ಯಾಂಕುಗಳು, ತಮ್ಮ ಠೇವುಗಳನ್ನು ಹೆಚ್ಚಿನ ಹಣವನ್ನು ಕೇಂದ್ರ ಬ್ಯಾಂಕುಗಳಲ್ಲಿಟ್ಟು ಅವುಗಳ ಪೋಷಕ ಸಂಸ್ಥೆಗಳಾಗಿ ಪರಿಣಮಿಸಿವೆ.

ಇಷ್ಟು ಪರಿಪೂರ್ಣವಾಗಿ ರಚಿತವಾದ ಈ ಪದ್ಧತಿಯು ಸಹಕಾರದ ಮಿತವ್ಯಯದ ಮುಖಾಂತರ ಬಹು ಘನವಾದ ಸಿದ್ಧಿಗೆ ದಿಕ್‌ಸೂಚಿಯಾಗಿದೆ. ಅಲ್ಲದೆ ನಮ್ಮ ಭಾರತಪಲ್ಲಿಯ ಒಕ್ಕಲಿಗರಿಗೂ ಸಹಕಾರಿ ಸಂಘಗಳಿಗೂ ಒಂದು ಅಮೂಲ್ಯವಾದ ಪಾಠವಾಗಿದೆ.

## ‘ ಕ್ಲೀಅರಿಂಗ ’ ಕಾರ್ಯ

ಹೈನದ ಕಾರಖಾನೆಗಳು, ಖರೀದಿ ವಿಕ್ರಿ ಸಂಸ್ಥೆಗಳು ಹಣ್ಣುಮಾರಾಟದ ಸಂಘಗಳು—ಈ ಮೊದಲಾದ ಸ್ಥಾನಿಕ ಸಂಘಗಳ ನಡುವೆ ಸ್ಥಾನಿಕ ಬ್ಯಾಂಕುಗಳು ‘ಕ್ಲೀಅರಿಂಗ’ ಸಂಸ್ಥೆಗಳಂತೆ ಕಾರ್ಯವನ್ನು ನಿರ್ವಹಿಸುವವು. ಹಾಲು ಹೈನದಿಂದ ತಯಾರಾಗುವ ಸಾಮಾನು, ಹತ್ತಿ ಮೊದಲಾದವುಗಳನ್ನೊಳಗೊಂಡು ನೂರಕ್ಕೆ ೭೫ರಷ್ಟು ಒಕ್ಕಲುತನದ ಹುಟ್ಟುವಳಿಯು ಸಹಕಾರಿ ಸಂಘಗಳ ಮುಖಾಂತರ ಮಾರಾಟವಾಗುವದು. ಸಹಕಾರಿ ಸಂಘಗಳು ಒಕ್ಕಲಿಗರಿಗೆ ಬೇಸಾಯಕ್ಕೆ ಅಗತ್ಯವಿರುವ ಉಪಕರಣ, ಸಾಮಾನು ಮೇವು, ಆಹಾರ ಧಾನ್ಯ. ಈ ಮೊದಲಾದವುಗಳನ್ನು ಪೂರೈಸುತ್ತವೆ. ಪ್ರತಿಯೊಂದು ಹಳ್ಳಿಯಲ್ಲಿ ಬಹಳಕಡೆಗೆ, ಸುಮಾರು ಆರೇಳು ಒಕ್ಕಲಿಗರ ಸಂಸ್ಥೆಗಳಿವೆ. ಇವೆಲ್ಲವೂ ಒಂದೊಂದು ವೈಶಿಷ್ಟ್ಯದಿಂದ ಕೂಡಿವೆ. ಒಬ್ಬೊಬ್ಬ ಒಕ್ಕಲಿಗನು ಈ ಎಲ್ಲ ಸಂಘಗಳ ಸಂಗಡ ವ್ಯವಹಾರ ಸಾಗಿಸುವನು. ಈ ಸಂಸ್ಥೆಗಳಲ್ಲಿ ಅವನು ಹಣವನ್ನಿಡುವ ಸಾಹುಕಾರನಾಗಿರಬಹುದು. ಅಥವಾ ಇವುಗಳಿಂದ ಹಣಪಡೆಯುವ ಸಾಲಗಾರನಾಗಿರಬಹುದು. ಅಂತೂ ಇವುಗಳೊಡನೆ ಒಂದಿಲ್ಲೊಂದು ಬಗೆಯ ಸಂಬಂಧವನ್ನಿಟ್ಟುಕೊಂಡೇ ಇರುವನು.

ಒಕ್ಕಲಿಗರ ಲೆಕ್ಕವೂ ಹಣದ ವ್ಯವಹಾರವೂ ಮುಖ್ಯವಾಗಿ ಸ್ಥಾನಿಕ ಬ್ಯಾಂಕುಗಳ ಮುಖಾಂತರವಾಗಿಯೇ ಮೇಳಗೂಡಿಸಲ್ಪಡುವವು, ಸರಿಪಡಿಸಲ್ಪಡುವವು. ಅವರ ಹುಟ್ಟುವಳಿಯ ಮಾರಾಟದ ಮೇಲೆ ಕೊಡಲ್ಪಡತಕ್ಕ ಹಣದ ಬಾಕಿಯು ಬ್ಯಾಂಕಿನಲ್ಲಿ ಅವರ ಚಾಲತಿಠೇವು ಖಾತೆಗೆ ಜಮೆ ಮಾಡಲ್ಪಡುವದು. ಈ ಪದ್ಧತಿಯಿಂದ ಸ್ಥಾನಿಕ ಬ್ಯಾಂಕುಗಳಲ್ಲಿ ಉಳಿತಾಯದ ಹಣಕ್ಕೆ ಪರ್ಯಾಯದಿಂದ ಪ್ರೋತ್ಸಾಹನ ಕೊಟ್ಟಂತಾಗುವದು. ಒಕ್ಕಲಿಗರ ಮಾಲ ಮಾರಾಟದ ಮೇಲಿನ ಕರ ಮತ್ತಿತರ ಕೊಡತಕ್ಕ ಬಾಕಿಗಳನ್ನು, ಸಾಲದ ಬ್ಯಾಂಕುಗಳಲ್ಲಿ ಒಕ್ಕಲಿಗರ ಚಾಲತಿ ಠೇವುಖಾತೆಗೆ ಜಮೆಯಾಗಿರುವ ಹಣದೊಳಗಿಂದ ಕೊಡಲಾಗುವದು.

ಈ ಬ್ಯಾಂಕುಗಳು ಕೇಂದ್ರ ಬ್ಯಾಂಕುಗಳ ಸಹಾಯದಿಂದ ಹಳ್ಳಿಗರಿಗೆ ಬ್ಯಾಂಕಿನ ವ್ಯವಹಾರದ ಎಲ್ಲ ಬಗೆಯ ಅನುಕೂಲತೆಗಳನ್ನು ಒದಗಿಸಿಕೊಡುವವು. ಈ ಕೇಂದ್ರ ಬ್ಯಾಂಕುಗಳೋ, ಸ್ಟಾಕ್ ಎಕ್ಸಚೇಂಜ ಅಸೋಸಿಯೇಶನ್ನಿನ ಮತ್ತು ನೆದರ್ಲಂಡ ಬ್ಯಾಂಕಿನ ಸಭಾಸದತ್ವವನ್ನು ವಹಿಸಿರುವವು.

೧೯೪೭ ಡಿಸೆಂಬರ ೩೧ನೇ ತಾರೀಖಿಗೆ, ನೆದರ್ಲಂಡಿನ್ನಲ್ಲಿಯ ೧೩೨೦ ಸ್ಥಾನಿಕ ಬ್ಯಾಂಕುಗಳ ಒಟ್ಟು ಸಭಾಸದರ ಸಂಖ್ಯೆ ೨,೬೦,೫೨೨ ಇದ್ದಿತು. ನಮ್ಮ ಮುಂಬಯಿ ಸಂಸ್ಥಾನದಲ್ಲಿ ಪ್ರತಿಯೊಂದು ಬ್ಯಾಂಕಿನ ಸಭಾಸದರ ಸರಾಸರಿಯು ೬೫ ಇದ್ದರೆ, ಇಲ್ಲಿಯ ಬ್ಯಾಂಕುಗಳ ಸಭಾಸದರ ಸರಾಸರಿಯು ೨೦೦ ಇರುವದು. ಸಾಲದ ಬ್ಯಾಂಕುಗಳಲ್ಲಿ ಠೇವು ಮತ್ತು ಚಾಲತಿ ಠೇವು ಖಾತೆಗಳಿಗೆ ಜಮೆಯಾದ ಉಳಿತಾಯದ ಹಣವು ೨,೪೩೭೦೦೦೦೦೦ ರೂಪಾಯಿಯ ವರೆಗೆ ತಲುಪಿತು. ಠೇವಿಟ್ಟವರ ಸಂಖ್ಯೆ ೩೨೨೦೬೦೭ ಇದ್ದಿತು. ಸಭಾಸದರ ಕಡೆಯಿಂದ ಬರತಕ್ಕ ಸಾಲಬಾಕಿಯು ೧೦೬೯೫೦೦೦ ರೂಪಾಯಿ ಇನ್ನಿತರ ಬಾಕಿಯು ೧೨೬೨೭೦೦೦ ರೂಪಾಯಿ ಇದ್ದಿತು. ಅವರ ಸಾಲದ ಮತ್ತು ಠೇವಿನ ಪ್ರಮಾಣವು ಅನುಕ್ರಮವಾಗಿ ಒಂದಕ್ಕೆ ಹತ್ತು ಇವೆ.

ಸಾಲದ ಬ್ಯಾಂಕುಗಳು ಕೇಂದ್ರ ಬ್ಯಾಂಕುಗಳ ನಿಯಂತ್ರಣ ಮೇಲ್ವಿಚಾರಣೆಗಳಿಗೆ ಒಳಪಟ್ಟಿರುವವು. ಕೇಂದ್ರ ಬ್ಯಾಂಕುಗಳು ಈ ನಿಯಂತ್ರಣ ಮೇಲ್ವಿಚಾರಣೆಯ ಸಫಲತೆಗಾಗಿ ಇನ್ಸಪೇಕ್ಟರರ ವರ್ಗವನ್ನು ಸಂಬಳ ಕೊಟ್ಟು ಇಟ್ಟುಕೊಳ್ಳುವವು. ಅಲ್ಲದೆ ಪ್ರಸಂಗಬಿದ್ದಾಗ ಅವಶ್ಯ ಕಂಡಾಗ, ಸಾಲದ ಬ್ಯಾಂಕುಗಳಿಗೆ ಇವು ಎಲ್ಲ ರೀತಿಯಿಂದಲೂ ತಮ್ಮ ಸಹಾಯವನ್ನು ನೀಡುವವು. ನಮ್ಮ ಮುಂಬಯಿ ಸಂಸ್ಥಾನದಲ್ಲಿಯ ಪ್ರಾಂತಿಕ ಸಹಕಾರಿ ಸಂಸ್ಥೆಯೂ (ಇನ್‌ಸ್ಟಿಟ್ಯೂಟ) ಮತ್ತು ಸಹಕಾರಿ ಮೇಲ್ವಿಚಾರಣೆ ಸಂಯುಕ್ತ ಸಂಘಗಳೂ (ಸುಪಾರವಾಯಝಿಂಗ ಯುನಿಯನ್ನ) ಕೈಕೊಳ್ಳಬಹುದಾದ ಅನೇಕ ಚಟುವಟಿಕೆಗಳನ್ನು ಈ ಕೇಂದ್ರ ಬ್ಯಾಂಕುಗಳು ಕೈಕೊಳ್ಳುತ್ತವೆ. ಕೇಂದ್ರಬ್ಯಾಂಕುಗಳ ಮತ್ತು ಅವುಗಳ ಸದಸ್ಯತ್ವವನ್ನು ವಹಿಸಿದ ಸಾಲದ ಬ್ಯಾಂಕುಗಳ ನಡುವಿನ ಸಂಬಂಧವು ತೀರ ನಿಕಟವೂ ಗೌರವಪೂರ್ಣವೂ ಆಗಿರುವದು.

# ಕೇಂದ್ರ (ಬ್ಯಾಂಕುಗಳಿಂದ) ಸಾಲ ಪೂರೈಕೆ

ಬೇಡಿದಾಗ ಕೊಡುವ ಸಿದ್ಧತೆಯಿಂದ ಕಾಯ್ದಿಟ್ಟ ಹಣದ ಜವಾಬುದಾರಿಯುಳ್ಳ ಎರಡೂ ಕೇಂದ್ರ ಬ್ಯಾಂಕುಗಳು ನಿಯಮಿತ ಜವಾಬುದಾರಿಯುಳ್ಳವಿವೆ. ತಮ್ಮ ಸದಸ್ಯತ್ವವನ್ನು ವಹಿಸಿದ ಎಲ್ಲ ಒಕ್ಕಲುತನದ ಸಹಕಾರಿ ಸಂಘಗಳಿಗೆ ಸಾಲಪೂರೈಸುವ ಕೇಂದ್ರ ಸಂಸ್ಥೆಗಳಾಗಿವೆ. ಈ ಕೇಂದ್ರ ಬ್ಯಾಂಕುಗಳು ಈ ಸೆಂಟ್ರಲ್ ಬ್ಯಾಂಕುಗಳು ಸಮಾವೇಶವಾದ ಎಲ್ಲ ಒಕ್ಕಲುತನದ ಬ್ಯಾಂಕುಗಳಿಗೆ ಸೆಂಟ್ರಲ್ ಕ್ಯಾಶ್ ಆಫೀಸು ಅಂದರೆ ಕೇಂದ್ರ ಹಣಪಡೆಯುವ ಕಚೇರಿಗಳಾಗಿವೆ. ಒಕ್ಕಲುತನದ ಬ್ಯಾಂಕುಗಳು ತಮ್ಮಲ್ಲಿಯ ಹೆಚ್ಚಿನ ನಿಧಿಗಳನ್ನು ಕೇಂದ್ರ ಬ್ಯಾಂಕುಗಳಲ್ಲಿಟ್ಟು, ತಮ್ಮ ಸದಸ್ಯರಿಗೆ, ವಿಶೇಷವಾಗಿ ದೀರ್ಘಾವಧಿಯ ಸಾಲಗಳನ್ನು ಕೊಡಲಿಕ್ಕೆ ತಿರುಗಿ ಕೇಂದ್ರ ಬ್ಯಾಂಕುಗಳಿಂದ ಸಾಲ ಪಡೆಯುತ್ತವೆ.

ಕೇಂದ್ರ ಬ್ಯಾಂಕುಗಳು ಇನ್ನುಳಿದ ಒಕ್ಕಲಿಗರ ಸಹಕಾರಿ ಸಂಘಗಳಿಗೂ ಸಾಲ ಪೂರೈಸುವವಲ್ಲದೆ, ವ್ಯಾಪಾರಕ್ಕೆ ಸಂಬಂಧಿಸಿದ ಉದ್ಯೋಗವನ್ನು ಕೈಕೊಳ್ಳುವವು. ಎರಡೂ ಕೇಂದ್ರ ಬ್ಯಾಂಕುಗಳು ಮಾರ್ಕೇಟಿಂಗ ಮತ್ತು ಉತ್ಪಾದಕ ಸಂಘಗಳಿಗೆ ಸಣ್ಣ ಮುದ್ದತಿನ ಸಾಲಗಳನ್ನು ಪೂರೈಸುವವಲ್ಲದೆ, ಈ ಸಂಘಗಳಿಗೆ ಇನ್‌ವ್ಹೆಸ್ಟಮೆಂಟ ಕ್ರೆಡಿಟ್ ಅಂದರೆ ತೊಡಕಿಸಿದ ಹಣದ ಮೇಲೆ ಪತ್ತನ್ನು ಪೂರೈಸುವವು. ಈ ಬಗೆಯ ಸಾಲ ಪೂರೈಕೆಯಲ್ಲಿ ವ್ಯವಹಾರಿಕ ಮತ್ತು ತಾಂತ್ರಿಕ ಅಪಾಯ್ಗಗಳು ಸಾಕಷ್ಟು ಇವೆ. ಆದುದರಿಂದ ಈ ಎರಡೂ ಕೇಂದ್ರ ಬ್ಯಾಂಕುಗಳು ಹೆಗ [illegible] ಗೆರಡಕ್ಕೂ ಕೂಡಿಯೇ ಒಂದು ಸಮಾನ [illegible] ಯನ್ನು ಸ್ಥಾಪಿಸಿರುವವು. ಸಕ್ಕರೆಯ [illegible] ಕಾರಖಾನೆಗಳು ಪ್ರತ್ಯೇಕ ಮಾರ್ಕೇಟಿಂಗ ಸಂಸ್ಥೆಗಳು ಈ [illegible] ದೊಡ್ಡ ದೊಡ್ಡ ಕಾರಖಾನೆ ಸಂಸ್ಥೆಗಳಿಗೆ [illegible] ವಾಗಿಯೇ ಸಾಲ ಪೂರೈಸುವವು. [illegible] ಈ [illegible] ನಮುನಿನ ಸಂಬಂಧವು [illegible] ಸನ್ನಿನ ತತ್ವಗಳ [illegible] ಪೂರ್ಣವಾದ ಸಹಕಾರದ [illegible] ಬೇರೆ ಬೇರೆ ಪ್ರಕಾರದ [illegible]

ವಿಕಾಸಕ್ಕೂ ಎಷ್ಟೋ ಮಟ್ಟಿಗೆ ಈ ಸಾಮರ್ಥ್ಯಪೂರ್ಣವಾದ ಸಹಕಾರ ಪದ್ಧತಿಯೇ ಹೊಣೆಯಾಗಿದೆ. ಹಳ್ಳಿಯಲ್ಲಿಯ ಸ್ಥಾನಿಕ ಬ್ಯಾಂಕು ಒಕ್ಕಲಿಗರ ಎಲ್ಲ ಬಗೆಯ ಆರ್ಥಿಕ ಚಟುವಟಿಕೆಗಳಿಗೆ ಕೇಂದ್ರ ಸ್ಥಾನವಾಗಿದೆ. ಎಲ್ಲ ಸ್ಥಾನಿಕ ಸಹಕಾರಿ ಸಂಸ್ಥೆಗಳೊಡನೆ ಒಳ್ಳೆ ಆಂತರಿಕ ಸಂಬಂಧವನ್ನಿಟ್ಟುಕೊಂಡಿರುವದು. ವಿವಿಧಪ್ರಕಾರದ, ವಿಶಿಷ್ಟಪ್ರಕಾರದ ಸಹಕಾರಿ ಸಂಘಗಳ ಪ್ರಗತಿಯ ವಿಷಯದಲ್ಲಿ ಎಲ್ಲ ಬದಿಗಳಿಂದಲೂ ಹರಿದು ಬಂದುಕೂಡಿದ ನದಿಗಳ ಕೇಂದ್ರದಂತೆ ಬಲಿಷ್ಠವೂ ಪರಿಣಾಮಕಾರಿಯೂ ಆದ ಮಹತ್ವದ ಪಾತ್ರವನ್ನು ಹಳ್ಳಿಯಲ್ಲಿಯ ಸ್ಥಾನಿಕ ಬ್ಯಾಂಕು ವಹಿಸಿರುವದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲವಷ್ಟೇ ?

# ೪ ನೆದರ್ಲ್ಯಾಂಡಿನಲ್ಲಿ ಹೈನದ ಸಹಕಾರಿ ಸಂಘಗಳು

ಅನೇಕ ದೇಶಗಳಲ್ಲಿಯ ಬಹು ಸಂಖ್ಯಾಕರಾದ ಒಕ್ಕಲಿಗರಲ್ಲಿ ಒಂದು ತೀರ ಸಣ್ಣ ವಿಭಾಗವಾದ ನೆದರ್ಲ್ಯಾಂಡಿನ ಒಕ್ಕಲಿಗರು ಸಹಕಾರದಲ್ಲಿ ತಮ್ಮ ಅನೇಕ ಆಪತ್ತುಗಳಿಗೆ ಪರಿಹಾರವನ್ನು ಕಂಡುಕೊಂಡರು. ಹೈನದ ಸಹಕಾರಿ ಸಂಘಗಳನ್ನು ಇಲ್ಲಿಯ ಒಕ್ಕಲಿಗರು ಸಂಘಟಿಸಿ ಯಶಸ್ವಿಯಾಗಿ ನಡೆಯಿಸಿಕೊಂಡು ಹೋಗುವ ದೃಷ್ಟಾಂತವು ನಮ್ಮ ಭಾರತದ ಒಕ್ಕಲಿಗರ ಕಣ್ಣನ್ನು ತೆರೆಯದಿರದು.

ನೆದರ್ಲ್ಯಾಂಡಿನಲ್ಲಿಯ ಒಕ್ಕಲಿಗರು ಸಾಧಿಸಿದ ಉನ್ನತ ಪ್ರಮಾಣದ ವಿಕಾಸಕ್ಕೆ ಕಾರಣಗಳೇನು ಬಲ್ಲಿರಾ? ಸರಕಾರದ ಸಹಾಯ ಮತ್ತು ಪ್ರೋತ್ಸಾಹನ, ಸಹಕಾರದ ಮುಖಾಂತರ ಸಮಸ್ಯೆಗೆ ಪರಿಹಾರ, ಫಲವತ್ತಾದ ಭೂಮಿ, ಅನುಕೂಲವಾದ ಹವೆಯ ಪರಿಸ್ಥಿತಿ-ಇವೆಲ್ಲವೂ ಒಕ್ಕಲಿಗರ ಪರಿಸ್ಥಿತಿಯ ಸುಧಾರಣೆಗೆ ಹೊಣೆಯಾಗಿವೆಯೆಂದು ಬೇರೆ ಹೇಳಬೇಕೆ? ದನಗಳ ಸಂಗೋಪನೆಗೂ ಹೈನದ ವ್ಯವಸಾಯಕ್ಕೂ ಇಲ್ಲಿಯ ಭೂಗುಣವು ಸಾಕಷ್ಟು ಅನುಕೂಲವಾಗಿದ್ದು ನಿರಂತರವೂ ಹುಲ್ಲುಗಾವಲಿನ ಬೆಂಬಲವಿದೆ. ಫ್ರೀಜಲಂಡ, ಉತ್ತರ ಹಾಲಂಡ, ದಕ್ಷಿಣ ಹಾಲಂಡ ಮತ್ತು ಯುಟ್ರೆಚಿಟ್ಟ-ಗಳಲ್ಲಿ ಮಹಾಕ್ಷೇತ್ರವನ್ನೊಳಗೊಂಡ ಹುಲ್ಲುಗಾವಲಿನ ರಮಣೀಯ ದೃಶ್ಯವು ನಿರಂತರವೂ ಕಂಗೊಳಿಸುವದು. ಒಟ್ಟಿನಲ್ಲಿ ಡಚ್ಚದೇಶದ ಅರ್ಧಕ್ಕಿಂತಲೂ ಹೆಚ್ಚು ಭಾಗವು ಹುಲ್ಲುಗಾವಲಿನಿಂದಾವೃತವಾಗಿದ್ದು ಬಹುಸಂಖ್ಯಾಕ ದನಕರುಗಳು ಇವರ ಆಶ್ರಮದಲ್ಲಿ ಸಂರಕ್ಷಿತವಾಗುವವು. ದೇಶದ ಉಳಿದ ಪ್ರದೇಶದಲ್ಲಿ, ವಿಶೇಷವಾಗಿ ದಕ್ಷಿಣದಲ್ಲಿ, ಒಕ್ಕಲಿಗರು ಸಣ್ಣ ಸಣ್ಣ ತುಂಡು ಭೂಮಿಗಳನ್ನು ಧಾರಣಮಾಡಿರುವದರಿಂದ, ಒಕ್ಕಲುತನದ ಜೊತೆಗೆ ಹೈನದ ವ್ಯವಸಾಯವನ್ನು ಉಪೋದ್ಯೋಗವೆಂದು ಕೈಕೊಂಡಿದ್ದು, ಇದರ ಮುಖಾಂತರ ತಮ್ಮ ಉತ್ಪನ್ನದ ಅಭಿವೃದ್ಧಿಯನ್ನು ಮಾಡಿಕೊಂಡಿರುವರು. ಧಾರಣ ಮಾಡಲ್ಪಟ್ಟ ಜಮೀನುಗಳು ಆರ್ಥಿಕ ದೃಷ್ಟಿಯಿಂದ ವಿಷಮ ಪರಿ-

ಸ್ಥಿತಿಯಲ್ಲಿರುವಡೆಯಲ್ಲಿ ಹೈನದ ವ್ಯವಸಾಯವು ಹೊಲದ ಸಾಗುವಳಿಯ ಜೊತೆಗೆ ಹೆಗಲಿಗೆ ಹೆಗಲು ಕೊಟ್ಟು ಮುಂದುವರಿಯುತ್ತದೆ.

ನೆದರ್ಲಂಡಿನಲ್ಲಿಯ ಹವೆಯ ಗುಣವು ಹುಲ್ಲುಗಾವಲಿನ ಬೆಳವಣಿಗೆಗೆ ಸಾಕಷ್ಟು ಅನುಕೂಲವಿರುವದರಿಂದ ಇಲ್ಲಿಯ ಹುಲ್ಲುಗಾವಲುಗಳು ನೀರಿನ ಕೊರತೆಯಿಂದಾಗಲೀ, ಮಂಜಿನಿಂದಾಗಲೀ ಸ್ವಾಭಾವಿಕವಾಗಿ ಕೆಡುವ ಭಯವು ಕಡಿಮೆ. ಈ ಹುಲ್ಲುಗಾವಲುಗಳಿಗೆ ಸಾಕಷ್ಟು ಗೊಬ್ಬರ ಹಾಕಿ, ಉತ್ತಮಪ್ರಕಾರದ ಹುಲ್ಲು ಬೆಳೆಯುವಂತೆ ಎಲ್ಲ ರೀತಿಯಿಂದಲೂ ದಕ್ಷತೆ ವಹಿಸಲಾಗುವದು. ಇದಕ್ಕೆ ಪ್ರತಿಫಲವಾಗಿ ಇವು ದನಕರುಗಳಿಗೆ ಉತ್ತಮ ಪ್ರಕಾರದ ಹುಲ್ಲನ್ನು ಪೂರೈಸಿ, ಅವುಗಳ ಸಂರಕ್ಷಣೆಯ ಭರವಸೆಯನ್ನು ವಹಿಸುತ್ತವೆ.

ಇಲ್ಲಿಯ ಬೇಸಗೆಯೋ ಆರು ತಿಂಗಳ ಅವಧಿಯದು. ಈ ಅವಧಿಯಲ್ಲಿ ದನಕರುಗಳು ಹಗಲಿರುಳು ಹುಲ್ಲುಗಾವಲುಗಳಲ್ಲಿಯೇ ವಾಸಮಾಡುತ್ತ ಸತ್ವವುಳ್ಳ ಹುಲ್ಲನ್ನು ತಿಂದು ತೇಗಿ ದುರಕಿಹಾಕುವವು. ಚಳಿಗಾಲದಲ್ಲಿಯ ಕಟಗುಟ್ಟುವ ಕುಳಿರ್ಗಾಳಿಯ ಮೂಲಕವಾಗಿ ಈ ದನಕರುಗಳನ್ನು ಬೆಚ್ಚನೆಯ ಕೊಟ್ಟಿಗೆಗಳಲ್ಲಿ ಕಟ್ಟಿ, ಶಾಸ್ತ್ರೋಕ್ತವಾಗಿ ಸಿದ್ಧಪಡಿಸಿದ ಹುಲ್ಲಿನ ಸತ್ವದಿಂದ ಸಂರಕ್ಷಿಸುವರು.

## ಸರಕಾರದ ಪ್ರೋತ್ಸಾಹನೆ.

ಹೋರಿಗಳ ಸಂರಕ್ಷಣೆಯ ಮತ್ತು ಸಂಗೋಪನೆಯ ವಿಷಯದಲ್ಲಿ ಸರಕಾರದ ನಿಯಂತ್ರಣವಿದ್ದು, ಜಾತಿವಂತ ಹೋರಿಗಳ ಪೀಳಿಗೆಯನ್ನು ಕಾಯುವಲ್ಲಿ ಬೆಳೆಸುವಲ್ಲಿ ಪ್ರೋತ್ಸಾಹನ ಕೊಡುವ ದೃಷ್ಟಿಯಿಂದ ಒಕ್ಕಲಿಗರಿಗೆ ಸರಕಾರದವರು ಧನಸಹಾಯವನ್ನೊದಗಿಸುವರು. ಸರಕಾರದವರೂ ಕೂಡ ಸೆಂಟ್ರಲ್ ಮಿಲ್ಕ ರಿಕಾರ್ಡಿಂಗ ಸರ್ವ್ಹಿಸ್ ಎಂಬುವನ್ನು ಸ್ಥಾಪಿಸಿರುವರು.

ದನಗಳ ಬೇನೆಗಳನ್ನು ನಿಯಂತ್ರಿಸುವಲ್ಲಿ, ಪ್ರ ತಿ ಬಂ ಧಿ ಸು ವ ಲ್ಲಿ, ಎಲ್ಲಕ್ಕೂ ಮೊದಲು ಉಪಾಯಗಳನ್ನು ಕೈಕೊಂಡದೇಶಗಳಲ್ಲಿ ನೆದರ್ಲಂಡೂ ಒಂದು. ಸರಕಾರದ ಪಶುವೈದ್ಯಕೀಖಾತೆಯು ದನಕರುಗಳ ಆರೋಗ್ಯವನ್ನು ಕಾಯುವಲ್ಲಿ ಅವುಗಳ ಬೇನೆಗಳ ಮೇಲೆ ಪ್ರತಿಬಂಧಕ ಉಪಾಯಗಳನ್ನು

ಕೈಕೊಳ್ಳುವಲ್ಲಿ, ಯೋಜಿಸಬೇಕಾದ ಉಪಾಯಗಳ ಮೇಲ್ವಿಚಾರಣೆಯ ಹೊಣೆಯನ್ನೂ ಹೊರೆಯನ್ನೂ ಹೊತ್ತಿರುವದು. ಸ್ವಸಂತೋಷದಿಂದ ಸಂಘಟಿತರಾದ ಒಕ್ಕಲಿಗರಿಗೆ, ಸರಕಾರದ 'ನವಕರರ' ಮಾರ್ಗದರ್ಶನವಲ್ಲಿ ಪಶುವೈದ್ಯಕೀಯ ಖಾತೆಯ ಉಪದೇಶವೂ ಸಹಾಯವೂ ದೊರೆಯುವವು. ಕ್ಷಯರೋಗದಂತಹ ಮಹಾ ಮಹಾ ರೋಗಗಳಿಂದ ದನಕರುಗಳು ಅಲಿಪ್ತವಾಗಿರುವಹಾಗೆ ಕ್ರಮಗಳು ಕೈಕೊಳ್ಳಲ್ಪಟ್ಟಿವೆ. ದನಗಳ ಕಾಲುಬೇನೆ, ಬಾಯಿಬೇನೆ, ಮತ್ತಿತರ ಬೇನೆಗಳ ಮೇಲೆ ಪಶುವೈದ್ಯಕೀ ಸಂಶೋಧನಾ ಸಂಸ್ಥೆಯು ಸಂಶೋಧನೆಯನ್ನು ನಡೆಯಿಸುವ ದೃಷ್ಟಿಯಿಂದ ತನ್ನ ಲಕ್ಷ್ಯವನ್ನೆಲ್ಲ ಕೇಂದ್ರೀಕರಿಸಿರುವದು. ದನಗಳ ನಿರ್ಯಾತವು ಸರಕಾರದ ಪರೀಕ್ಷೆಗೆ ಒಳಪಟ್ಟಿರುವದು. ಯಾಕಂದರೆ, ಬೇನೆಗಳಿಂದ ಅಲಿಪ್ತವಾದ ಮುಕ್ತವಾದ ದನಗಳನ್ನಷ್ಟೇ ನಿರ್ಯಾತ ಮಾಡುವ ಬಗೆಗೆ, ಸರಕಾರವು ಪರೀಕ್ಷಿಸಿ ಭರವಸೆಕೊಡುವದು. "ಹರ್ಡಬುಕ್ ಅಸೋಸಿಯೇಶನ್" ಅಂದರೆ ದನಗಳ ಹಿಂದಿನ ಲೆಕ್ಕವಿಡುವ ಸಂಸ್ಥೆಯ ಸಹಾಯದಿಂದ ನೆದರ್ಲಂಡ ಸರಕಾರವು ಹಾಲಿನ ಉತ್ಪತ್ತಿಯನ್ನು ಶ್ರೇಷ್ಠ ತರಗತಿಯಲ್ಲಿ ಬೆಳೆಸುವಲ್ಲಿ ಮತ್ತು ಉತ್ತಮ ಜಾತಿಮತದನಗಳನ್ನು ಸಂಗೋಪನೆ ಮಾಡುವಲ್ಲಿ ಸಾಕಷ್ಟು ಆಸಕ್ತಿಯನ್ನು ವಹಿಸುವದು. ೧೮೭೪ರಲ್ಲಿ ಸ್ಥಾಪಿತವಾದ ನೆದರ್ಲಂಡ ಹರ್ಡಬುಕ್ ಅಸೋಸಿಯೇಶನ್ನು ದನಗಳ ಸಂಗೋಪನೆಯ, ಸುಧಾರಣೆಯ ಕಾರ್ಯದಲ್ಲಿ ಅಗ್ರತೆಯನ್ನು ವಹಿಸಿದೆ. ಈ ಅಸೋಸಿಯೇಶನ್ನಿನ ಕಾರ್ಯಕ್ಷೇತ್ರವು, ಫ್ರೀಜಲ್ಯಾಂಡನ್ನುಳಿದು, ಇಡೀ ದೇಶವನ್ನು ಆಕ್ರಮಿಸಿಸಿದೆ! ಫ್ರೀಜಲ್ಯಾಂಡಿನಲ್ಲಿ ಮಾತ್ರ, ಅದರ ಸಲುವಾಗಿಯೇ "ಫ್ರೀಜಸಿಯಸ್ ಕ್ಯಾಟಲ್ ಹರ್ಡಬುಕ್ ಅಸೋಸಿಯೇಶನ್" ಎಂಬ ಸಂಸ್ಥೆಯು ಸ್ಥಾಪಿತವಾಗಿದೆ.

ಹರ್ಡಬುಕ್ ಅಸೋಶಿಯೇಶನ್ನು ಅಂದರೆ ದನಗಳ ಹಿಂದಿನ ಲೆಕ್ಕವನ್ನಿಡುವ ಸಂಸ್ಥೆಯು. ದನಗಳು ಹುಟ್ಟಿದ ತಾರೀಖು, ಅವುಗಳ ವಂಶಾವಳಿಯ ವಿವರ, ಕರುಗಳ ಸಂಗೋಪನೆ, ಸುಕುಡು ಪೊಳಹು, ಉತ್ಪಾದನೆಯ ವಿಷಯ, ಈ ಮೊದಲಾದವುಗಳ ಬಗೆಗೆ ಒಂದು ನೋಂದನ್ನಿಡುವದು. ಮಿಲ್ಕರಿಕಾರ್ಡಿಂಗ ಸೊಸಾಯಟಿಗಳು ಹಾಲಿನ ವಿಷಯದಲ್ಲಿ ಲೆಕ್ಕವನ್ನಿಡುವವು. ಅನೇಕ ವಿಷಯಗಳಲ್ಲಿ ಹೈನದ ಕಾರಖಾನೆ ಅಥವಾ

ಫ್ಯಾಕ್ಟರಿಯು ಕೇಂದ್ರಬಿಂದುವಾಗಿ ಪರಿಣಮಿಸುವದು. ಸಮರ್ಥರಾದ ನಮೂನಾ ತಜ್ಞರ (ಸ್ಯಾಂಪ್ಲರ್ಸ) ಸಹಾಯ ಸಹಕಾರಗಳಲ್ಲಿ, ವಿಶಿಷ್ಟ ರೀತಿಯಲ್ಲಿ ತರಬೇತಿಹೊಂದಿದ ಇನಸ್ಪೆಕ್ಟರರು ಹಾಲಿನ ಉತ್ಪತ್ತಿಯ ಪ್ರಮಾಣವನ್ನು, ಅದರಲ್ಲಿಯ ಬೆಣ್ಣೆ ಹೆಡಸುಗಳ ಪರಿಮಾಣವನ್ನೂ ಕಂಡು ಹಿಡಿದು ನೊಂದಾಯಿಸಿಕೊಳ್ಳುವರು. ಪೀಳಿಗೆ, ಜನ್ಮತಾರೀಖು, ಆರು ವಂಶ ಅಥವಾ ತಲೆಗಳ ವರೆಗೆ ಪ್ರಾಣಿಯ ತಾಯಿ ತಂದೆಗಳ ವಿವರ, ಹಾಲಿನ ಉತ್ಪತ್ತಿ ಅದರಲ್ಲಿಯ ಬೆಣ್ಣೆ ಹೆಡಸುಗಳ ಪ್ರಮಾಣ, ಈ ಮೊದಲಾದವುಗಳ ವಿಷಯದಲ್ಲಿಯೂ ಮಾಹಿತಿಯನ್ನಿಡುವರು.

**ನೆದರ್ಲಂಡಿನಲ್ಲಿ ದನಗಳ ಮೂರು ಪ್ರಕಾರದ ಪಿಳಿಗೆಗಳಿರುವವು** (೧) ಫ್ರಿಜಿಸಿಯನ್ ಬ್ಲ್ಯಾಕ್ ಎಂಡ ವ್ಹಾಯಿಟ್, (ಫ್ರಿಜಲ್ಯಾಂಡಿನ ಕರಿ ಮತ್ತು ಬಿಳಿ ಜಾತಿ) (೨) 'ರೆಡ್ ಎಂಡ ವ್ಹಾಯಿಟ್' (ಕೆಂಪು ಮತ್ತು ಬಿಳಿಯ ಜಾತಿ) (೩) ವ್ಹಾಯಿಟ್ ಫೇಸ ಬ್ಲ್ಯಾಕ್ (ಬಿಳಿ ನೊಗದ ಕರಿ ಜಾತಿ). ಕರಿ ಬಿಳಿ ಹಂಡಬಂಡ ಆಕಳುಗಳ ಜಾತಿಯು ಇಡೀ ದೇಶವ ತುಂಬೆಲ್ಲ ಕಾಣುವದು. ಇವುಗಳಿಂದ ಸಾಕಷ್ಟು ಉತ್ಪತ್ತಿಯಿದೆ. ಹಾಲು ಮತ್ತು ಮಾಂಸಗಳ ಉತ್ಪತ್ತಿಯಲ್ಲಿ ಮೇಲಿನ ಮೂರು ಪ್ರಕಾರದ ಆಕಳುಗಳು ಹೆಸರಾಗಿವೆ. ಆದರೂ ಹಾಲಿನ ಉತ್ಪತ್ತಿಗೇನೇ ಪ್ರಥಮ ಸ್ಥಾನವು ಕೊಡಲ್ಪಟ್ಟಿದ್ದು, ಮಾಂಸದ ಉತ್ಪತ್ತಿಯ ವಿಷಯವು ತದನಂತರದು.

## ಉತ್ಪತ್ತಿ (ಹುಟ್ಟುವಳಿ)

ನೆದರ್ಲಂಡಿನಲ್ಲಿ ೧೫,೪೩,೦೦೦ ಹಿಂಡುವ ಆಕಳುಗಳಿವೆ. ಪ್ರತಿಯೊಂದು ಆಕಳಿನ ಹಾಲಿನ ವಾರ್ಷಿಕ ಸರಾಸರಿ ಉತ್ಪನ್ನವು ೩,೬೦೦ ಕಿಲೋಗ್ರಾಮು ಗಳಷ್ಟು (ಒಂದು ಕಿಲೋಗ್ರಾಮು ಅಂದರೆ ೨.೨ ಪೌಂಡುಗಳು) ಆಗುವದು. ಮತ್ತು ಈ ಹಾಲಿನಲ್ಲಿಯ ಹೆಡಸಿನ ಪ್ರಮಾಣವು ನೂರಕ್ಕೆ ೩.೬೦ರಷ್ಟು ಆಗುವದು. ಪ್ರತಿಯೊಂದು ಆಕಳಿನ ಪ್ರತಿ ದಿನದ ಹಾಲಿನ ಉತ್ಪತ್ತಿಯ ಪ್ರಮಾಣವು ಇಪ್ಪತ್ತು ಪೌಂಡುಗಳಿಗಿಂತ ತುಸು ಹೆಚ್ಚಿಗೆ ಆಗುವದು. ಆಕಳು ಈದ ತಾರೀಖಿನಿಂದ ಹಾಲುಕೊಡುವದನ್ನು ಅಂದರೆ ಹಿಂಡುವದನ್ನು ನಿಲ್ಲಿಸುವ ಅವಧಿಯವರೆಗೆ ಅಂದರೆ ಸುಮಾರು ೩೩೦ ದಿನಗಳಲ್ಲಿ ಪ್ರತಿ ಯೊಂದು ಆಕಳು ಕೊಟ್ಟ ಹಾಲಿನ ಪ್ರಮಾಣವು ತುಸು ಹೆಚ್ಚು ಕಡಿಮೆ

೭೦೦೦ ಕಿಲೋಗ್ರ್ಯಾಮುಗಳಷ್ಟಾಗುವದೂ, ಅದರಲ್ಲಿಯ ಹೆಡಸು ನೂರಕ್ಕೆ ನಾಲ್ಕರಷ್ಟಾಗುವದೂ ಇಲ್ಲಿ ದಿನದ ಮಾತಾಗಿದೆ.

ಹೈನದ ದನಗಳು ನಿಲ್ಲುವದಕ್ಕಾಗಿ ತಯಾರಿಸಿದ ಹಕ್ಕೆಯ ಉದ್ದಗಲ ಅಳತೆಯು ಉತ್ತರ ಭಾಗದಲ್ಲಿ ಸರಾಸರಿ ೩೭ ರಿಂದ ೭೫·ಯಕರೆಗಳವರೆಗಿರುವದು. ಉಳಿದ ಭಾಗಗಳಲ್ಲಿ ಅದರ ಅಳತೆಯು ೫ ರಿಂದ ೩೦ ಯಕರೆಗಳವರೆಗಿರುವದು. ಬಿಳೀ ಮತ್ತು ಕೆಂಪು ಜಾತಿಯ ದನಗಳು ಸಿಗುವೆಡೆಯಲ್ಲಿ ಹೈನದ ಹಕ್ಕೆಗಳು ತೀರ ಚಿಕ್ಕವಿರುವವು. ಭೂಮಿಯ ಚಿಕ್ಕ ತುಂಡನ್ನು ಧಾರಣಮಾಡಿದ ಒಕ್ಕಲಿಗನ ಬಳಿಯಲ್ಲಿ ಬಹಳ ಕಡಿಮೆಯೆಂದರೆ ಮೂರು ಆಕಳುಗಳಿರುವವು. ಆದರೆ ಅದೇ ಮುಖ್ಯವಾಗಿ ಹೈನದ ವ್ಯವಸಾಯವನ್ನು ಕೈಕೊಂಡ ಒಕ್ಕಲಿಗನ ಬಳಿಯಲ್ಲಿ ಬಹಳ ಕಡಿಮೆಯೆಂದರೆ, ಸರಾಸರಿ ಇಪ್ಪತ್ತು ಆಕಳುಗಳಿರುವವು.

೧೯೫೦ ರಲ್ಲಿ ೫೦,೦,೦೦೦, ೦೦೦೦ ಕಿಲೋಗ್ರಾಮುಗಳಷ್ಟು ಹಾಲಿನ ಉತ್ಪತ್ತಿಯಾಯಿತು. ಅದರಲ್ಲಿ ನೂರಕ್ಕೆ ೪೫ ಪ್ರಮಾಣದಷ್ಟು ಹಾಲು, ಗಿಣ್ಣ, ಬೆಣ್ಣೆ, ಹಾಲಿನ ಪುಡಿ, ಘನೀಭೂತ ಕ್ಷೀರ ಈ ಮೊದಲಾದವುಗಳ ರೂಪದಲ್ಲಿ ನಿರ್ಯಾತವಾದವು. ಉಳಿದ ಹಾಲು ಸ್ಥಾನಿಕ ಜನರಿಂದ ಬಳಸಲ್ಪಟ್ಟವು. ಒಟ್ಟು ನಿರ್ಯಾತದಲ್ಲಿ ನೂರಕ್ಕೆ ೭೫ ರಷ್ಟು ಪ್ರಾಣಿ-ಗಳಿಂದ ಹುಟ್ಟಿದ ಪದಾರ್ಥಗಳಿವೆ.

ನೆದರ್ಲಂಡಿನ ಜನಸಂಖ್ಯೆಯು ಸುಮಾರು ಒಂದು ಕೋಟಿಯಿದೆ. ಪ್ರತಿ ವರ್ಷಕ್ಕೆ ಪ್ರತಿ ಒಬ್ಬನ ಹಾಲಿನ ಉಪಯೋಗವು ೬೦೦ ಪೌಂಡುಗಳಷ್ಟಾಗುವದು. ಅಥವಾ ಪ್ರತಿ ದಿನಕ್ಕೆ ಸರಾಸರಿ ಎರಡು ಪೌಂಡುಗಳಷ್ಟಾಗುವದು. ೧೯೫೪ ರಲ್ಲಿ ನಿರ್ಯಾತಗಳ ಬೆಲೆಯು ೩೭೯೪೦೦೦೦೦೦-ಗಿಲ್ಡರಗಳಷ್ಟು ( ಅಂದರೆ ೪೭೪೬೫೦೦,೦೦೦, ರೂಪಾಯಿ ) ಆಯಿತು. ಇವುಗಳಲ್ಲಿ ಹೈನದ ಪದಾರ್ಥಗಳ ಬೆಲೆಯು ೫೫೮೦೦೦,೦೦೦, ಗಿಲ್ಡರಗ-ಳಷ್ಟು ಅಂದರೆ ೬೯೭೫೦೦೦, ೦೦ ರೂಪಾಯಿಗಳಷ್ಟಾಯಿತು.

ದೇಶದ ವಿಸ್ತಾರವು ಸುಮಾರು ೧೨೦೦೦ ಚೌರಸ ಮೈಲುಗಳಷ್ಟು ಅಂದರೆ ಮುಂಬಯಿ ಸಂಸ್ಥಾನದಲ್ಲಿಯ ಎರಡು ಜಿಲ್ಲೆಗಳಷ್ಟಿದೆ. ಈ ವಿಸ್ತಾ-ರದ ಪ್ರಮಾಣವನ್ನು ಲಕ್ಷಕ್ಕೆ ತೆಗೆದುಕೊಂಡರೆ, ಹೈನದ ಪದಾರ್ಥಗಳಿಂದ

ಬರುವ ಉತ್ಪನ್ನವು ಕಲ್ಪನಾತೀತವಾಗಿ ಪ್ರಚಂಡವಾಗಿದೆ. ಹಾಲಿನ ಹುಟ್ಟು-ವಳಿಯ ಬಹುಭಾಗವು ಯಂತ್ರದ ಕಾರಖಾನೆಗಳಲ್ಲಿ ಬೆಣ್ಣೆ, ಗಿಣ್ಣ, ಹಾಲಿನ ಪುಡಿ, ಗಟ್ಟಿ ಹಾಲು, ಈ ಮೊದಲಾದವುಗಳಲ್ಲಿ ರೂಪಾಂತರ ಹೊಂದುವದು. ಕರುಗಳನ್ನು ಹಂದಿಗಳನ್ನು ಪೋಷಿಸಲು ಕೆನೆ ತೆಗೆದ ಹಾಲಿನ ಬಹುಭಾಗವು ಉಪಯೋಗಿಸಲ್ಪಡುವದು. ಒಕ್ಕಲಿಗರು ಜಾತಿವಂತ ಹೋರಿಗಳನ್ನು ಆಕಳುಗಳನ್ನು ಪರದೇಶಗಳಿಗೆ ಮಾರುವರು. ಆಕಳುಗಳು ಹಾಲು ಕೊಡುವದನ್ನು ನಿಲ್ಲಿಸಿದ ಮೇಲೆ, ಅವುಗಳನ್ನು ಪುಷ್ಟಗೊಳಿಸಿ, ಕಟುಕರ ಮನೆಗಳಿಗೆ ಮಾರುವರು. ದನಗಳ ಸಂಹಾರ ಮಾಡಿ, ಅವುಗಳ ಮಾಂಸವನ್ನು ಪರದೇಶಗಳಿಗೆ ಕಳಿಸುವ ಸಹಕಾರೀ ಕಟುಕರ ಮನೆಗಳೂ ಉಂಟು.

ನೆದರ್ಲಂಡಿನಲ್ಲಿಯ ಹೈನದ ವ್ಯವಸಾಯದ ಯಶಸ್ಸಿಗೆ ಸಹಕಾರವೇ ಬಹು ಮಟ್ಟಿಗೆ ಕಾರಣವಾಗಿದೆ. ೧೮೮೦ ರ ಪೂರ್ವದಲ್ಲಿ, ಬೆಣ್ಣೆ ಗಿಣ್ಣಗಳನ್ನು ಒಕ್ಕಲಿಗರು ವೈಯಕ್ತಿಕವಾಗಿಯೇ ತಯಾರಿಸುತ್ತಿದ್ದರು. ಇವುಗಳನ್ನು ತಯಾರಿಸುವ ರೀತಿಯು ಹಳೆಯದೂ ಮತ್ತು ಬಹು ಖರ್ಚಿನದೂ ಇದ್ದಿತು. ಅಲ್ಲದೆ ನೆರೆಹೊರೆಯ ಪಟ್ಟಣಗಳಲ್ಲಿ ಇವು ಮಾರಾಟವಾಗುವ ಭರ-ವಸೆಯೂ ಇದ್ದಿರಲಿಲ್ಲ. ಮಾರಾಟವಾಗದೇ ಉಳಿದು ತಿರುಗಿ ಬಂದವುಗಳೂ ಸಾಕಷ್ಟು ಪ್ರಮಾಣದಲ್ಲಿರುತ್ತಿರಲಿಲ್ಲ. ಹೀಗಾಗಿ ವ್ಯಾಪಾರಸ್ಥರು ಲಾಭದ ಬಹು ಭಾಗವನ್ನು ಬಕ್ಕರಿಸುತ್ತಿದ್ದರು. ೧೮೮೦ ರಲ್ಲಿ ಕೆನೆ ಅಥವಾ ಬೆಣ್ಣೆ-ಯನ್ನು ಪ್ರತ್ಯೇಕಿಸುವ ಕ್ರೀಮ ಸಪರೇಟರ ಎಂಬ ಯಂತ್ರದ ಶೋಧನೆ-ಯಿಂದ, ಪಟ್ಟಣಗಳ ಬೆಳವಣಿಗೆಯಿಂದ ಹಾಲಿನಿಂದ ತಯಾರಾಗುವ ಪದಾರ್ಥಗಳಿಗೆ ಕ್ರಮವಾಗಿ ಬೇಡಿಕೆಯು ಹೆಚ್ಚಿ ಒಕ್ಕಲಿಗರ ಹೈನದ ವೈಯ-ಕ್ತಿಕ ಉದ್ಯೋಗವು ಹೈನದ ಯಾಂತ್ರಿಕ ಉದ್ಯೋಗಕ್ಕೆ ಮೆಲು ಮೆಲನೆ ಮಾರ್ಗಕೊಟ್ಟಿತು. ಒಕ್ಕಲಿಗರು, ಖಾಸಗಿ ವ್ಯವಹಾರದೊಡನೆ ಸ್ಪರ್ಧೆಯನ್ನು ನಡೆಸಲಾರದೆ, ವೈಯಕ್ತಿಕವಾಗಿ ಕಾರಖಾನೆಗಳನ್ನು ನಡೆಯಿಸಲಾರದೆ, ಒಂದೇ ಒಂದು ಉಪಾಯವಾದ ಸಹಕಾರದೆಡೆಗೆ ಹೊರಳಿದರು.

೧೮೮೬ ರಲ್ಲಿ ಫ್ರಿಜಲಾಂಡಿನ ೨೩ ಜನ ಒಕ್ಕಲಿಗರು ಕೂಡಿ, ಮೊದಲು ಒಂದು ಸಹಕಾರಿ ಸಂಘವನ್ನು ಸ್ಥಾಪಿಸಿದರು. ಈ ಮೊದಲೇ ಸಹಕಾರಿ ವಿಮೆಯ ಸಂಘಗಳು ಯಶಸ್ವಿಯಾಗಿ ನಡೆದಿದ್ದವು. ಮತ್ತು ಜನತೆಗೆ ಸಹ-ಕಾರದ ಹಿತವೂ ಗೊತ್ತಾಗಿದ್ದಿತು. ಈ ಒಕ್ಕಲಿಗರು ಸಹಕಾರಿ ಸಂಘದ

ಸಂಘಟನೆಯ ಮತ್ತು ಆಡಳಿತೆಯ ವಿಷಯದಲ್ಲಿ ಒಂದು ಸಾದಾ ಯೋಜನೆಯನ್ನು ಅನುಸರಿಸಿದ್ದರು. ಹೈನದ ಸಂಘಕ್ಕೆ ಪ್ರತಿಯೊಬ್ಬ ಒಕ್ಕಲಿಗನು ಅಂದರೆ ಸಭಾಸದನು ತನ್ನ ಹಾಲನ್ನೆಲ್ಲ ಮಾರುವ ಹೊಣೆಯನ್ನು ಹೊತ್ತಿದ್ದನು. ಪ್ರತಿಯೊಬ್ಬನು ಸಂಘಕ್ಕೆ ಮಾರಿದ ಒಟ್ಟು ಹಾಲಿನ ಪ್ರಮಾಣದಲ್ಲಿ ಲಾಭ ಹಂಚಬೇಕೆಂದು ಗೊತ್ತುಪಡಿಸಿದ್ದರು.

ಉಳಿದ ಒಕ್ಕಲಿಗರೂ ಅವರ ಹೆಜ್ಜೆಯಲ್ಲಿ ಹೆಜ್ಜೆ ಚೆಲ್ಲಿದರು. ೧೯೦೧ ರ ಸುಮಾರಿಗೆ ೪೦೭ ಹೈನದ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿ ಬಂದವು.

ಸದ್ಯಕ್ಕೆ ದೇಶದ ತುಂಬ ತಮ್ಮ ಪ್ರಭಾವವನ್ನು ಹರಡಿದ ೪೩೦ ಹೈನದ ಸಹಕಾರಿ ಸಂಘಗಳಿವೆ. ಸ್ಥಾನಿಕ ಹೈನದ ಸಂಘಗಳ ಸಭಾಸದರು ಬಹುತರವಾಗಿ ಒಕ್ಕಲಿಗರೇ ಇದ್ದು, ಈ ಸಂಘಗಳು ಅನಿಯಮಿತ ಜವಾಬುದಾರಿಯ ಮೇಲೆ ನಡೆಯುತ್ತವೆ. ಕೆಲವೊಂದು ಪ್ರಸಂಗಗಳಲ್ಲಿ ಸ್ಥಾನಿಕ ಸಹಕಾರಿ ಬ್ಯಾಂಕುಗಳು ಈ ಹೈನದ ಸಹಕಾರಿ ಸಂಘಗಳಿಗೆ ಸಾಲ ಪೂರೈಸುತ್ತವೆ. ತಮ್ಮಲ್ಲಿಯ ಹಾಲಿನ ಸಂಪೂರ್ಣ ಉತ್ಪತ್ತಿಯನ್ನೆಲ್ಲ ಹಾಲಿನ ಕಾರಖಾನೆಗಳಿಗೆ ಪೂರೈಸುವ ಬಗೆಗೆ, ಸದಸ್ಯರು ಬದ್ಧರಾಗಿರುವರು.

ವೈಯಕ್ತಿಕ ಹೈನದ ಅಂದರೆ ಹಿಂಡುವ ದನಗಳ ಹಕ್ಕಿಗಳಿಂದ ಕಾರಖಾನೆಗಳು ಹಾಲನ್ನು ಕೂಡ ಹಾಕುತ್ತವೆ. ಕಾರಖಾನೆಗಳು ಹಾಲನ್ನು ಸ್ವೀಕರಿಸಲು ಗೊತ್ತು ಮಾಡಿದ ಸ್ಥಳದಲ್ಲಿ ಹಾಲಿನ ಪರೀಕ್ಷೆಯಾಗಿ, ತೂಕವಾಗಿ, ಅದರ ತೂಕದ ಮತ್ತು ಹೆಸಿನ ಪ್ರಮಾಣದಲ್ಲಿ ಅದರ ಬೆಲೆಯನ್ನು ಕಟ್ಟಿ ಸಂಬಂಧಿಸಿದ ಒಕ್ಕಲಿಗನ ಲೆಕ್ಕಕ್ಕೆ ಜಮೆ ಮಾಡಲಾಗುವದು. ಪ್ರತಿ ಹದಿನಾಲ್ಕು ದಿನಕ್ಕೊಮ್ಮೆ ಸ್ಥಾನಿಕ ಬ್ಯಾಂಕಿನ ಮುಖಾಂತರ ಅಥವಾ ನಗದಾಗಿ ಹಾಲಿನ ಹಣದ ಬಾಕಿಯನ್ನೆಲ್ಲ ತೀರಿಸಲಾಗುವದು.

ಸಂಗ್ರಹಿತವಾದ ಹಾಲನ್ನು ಕಾರಖಾನೆಗಳು, ಬೆಣ್ಣೆ, ಗಿಣ್ಣ, ಹಾಲಿನ ಪುಡಿ ಈ ಮೊದಲಾದವುಗಳಿಗೆ ರೂಪಾಂತರಿಸುತ್ತವೆ. ಈ ಕಾರಖಾನೆಗಳು ದೊಡ್ಡ ದೊಡ್ಡ ಯಂತ್ರೋಪಕರಣಗಳನ್ನು ಪ್ರಯೋಗ ಶಾಲೆಗಳನ್ನು ಏರ್ಪಡಿಸಿ, ಅಲ್ಲಿ ತಾಂತ್ರಿಕ ಮತ್ತು ಯಾಂತ್ರಿಕ ವಿದ್ಯೆಯಲ್ಲಿ ಉಚ್ಚ ಶಿಕ್ಷಣ ಪಡೆದ ಅನುಭವಿಕ ಜನರನ್ನು ನೇಮಿಸಿಕೊಳ್ಳುವವು. ಹಾಲನ್ನು ಗಟ್ಟಿಗೊಳಿಸಿ, ತೆಳ್ಳನ್ನ ಹಾಲನ್ನು ಸ್ಥಾನಿಕ ಗ್ರಾಹಕರಿಗೆ ಪೂರೈಸುವ ಕಾರಖಾನೆಗಳು ಕೆಲವೊಂದು ಉಂಟು.

ಪ್ರಜಾಸತ್ತಾತ್ಮಕ ತತ್ವದ ಮೇಲೆ, ಸಹಕಾರಿ ಹೈನದ ಸಂಘಗಳು ತಮ್ಮ ವ್ಯವಹಾರವನ್ನು ಆಡಳಿತೆಯನ್ನು ನಡೆಯಿಸಿಕೊಂಡು ಹೋಗುತ್ತವೆ. ಅನೇಕ ಸಹಕಾರಿ ಸಂಘಗಳಲ್ಲಿ, ಅಲ್ಲಿಯ ಸಭಾಸದರು ಎಷ್ಟೇ ಆಕಳುಗಳನ್ನು ಸಾಕಿರಲಿ, ಪ್ರತಿಯೊಬ್ಬ ಸಭಾಸದನಿಗೆ ಒಂದು ಮತವಿರುವದು. ಹಾಲಿನ ಉತ್ಪತ್ತಿಯ ಮೂರು ನಾಲ್ಕಾಂಶಭಾಗವು ಸಹಕಾರಿ ಹೈನದ ಸಂಘಗಳ ಮುಖಾಂತರ ವಿನಿಯೋಗಿಸಲ್ಪಡುವದು. ದೊಡ್ಡ ದೊಡ್ಡ ಕಂಪನಿಗಳು ಸುಮಾರು ಒಂದೂವರೆನೂರು ಖಾಸಗಿ ಸಂಸ್ಥೆಗಳನ್ನು ಇದೇ ಉದ್ದೇಶಕ್ಕಾಗಿ ಸ್ಥಾಪಿಸಿವೆ. ಇವುಗಳಲ್ಲಿ, ಕೆಲವೊಂದು ಸಂಸ್ಥೆಗಳು ಜಾಯಿಂಟ-ಸ್ಟಾಕ್ ಕಂಪನಿಗಳಿಂದ ಅಂದರೆ ಬಂಡವಾಳ ಪಾಲೀ ಕಂಪನಿಗಳಿಂದ ಸ್ಥಾಪಿತವಾಗಿವೆ.

ನೆದರ್ಲಂಡಿನಲ್ಲಿ ಇಂದಿಗೆ ಕಂಡು ಬರುವ ೪೨೦ ಹೈನದ ಸಂಘಗಳಲ್ಲಿ ೨೩೫ ಸಂಘಗಳು ಬೆಣ್ಣೆ, ಗಿಣ್ಣಗಳನ್ನು ೪೩ ಸಂಘಗಳು ಗಿಣ್ಣ, ಮತ್ತು ಹಾಲಿನ ಪುಡಿಯನ್ನು ತಯಾರಿಸುತ್ತವೆ. ಬೆಣ್ಣೆಯ ಒಟ್ಟು ಉತ್ಪತ್ತಿಯಲ್ಲಿ ನೂರಕ್ಕೆ ೮೨ ರಷ್ಟು, ಗಿಣ್ಣದ ಉತ್ಪತ್ತಿಯಲ್ಲಿ ನೂರಕ್ಕೆ ೮೧ ರಷ್ಟು, ಕೆನೆ ತೆಗೆದ ಹಾಲಿನ ಒಟ್ಟಿನಲ್ಲಿ ನೂರಕ್ಕೆ ೭೩ ರಷ್ಟು, ಗಿಣ್ಣದ ಸತ್ವದಲ್ಲಿ ನೂರಕ್ಕೆ ೬೩ ರಷ್ಟು ಪ್ರಮಾಣವು, ಸಹಕಾರೀ ಹೈನದ ವ್ಯವಸಾಯದ ಮುಖಾಂತರ ವಿನಿಯೋಗಿಸಲ್ಪಡುವದು. ಸ್ಥಾನಿಕ ಹೈನದ ಸಂಸ್ಥೆಯ ಕಾರ್ಯಕಲಾಪಗಳೆಲ್ಲವೂ ಹಾಲನ್ನು, ಬೆಣ್ಣೆ, ಗಿಣ್ಣ, ಗಟ್ಟಿ ಹಾಲು, ಮೊದಲಾದವುಗಳನ್ನು ತಯಾರಿಸುವಲ್ಲಿ ಕೊನೆಗೊಳ್ಳುತ್ತವೆ. ಹೈನದ ಅಂಗಡಿಗಳು ಸ್ಥಾನಿಕ ಜನರ ಬಳಕೆಗಾಗಿ ಹಾಲನ್ನು ಪೂರೈಸುವ, ಹಂಚುವ ವ್ಯವಸ್ಥೆ ಮಾಡುತ್ತವೆ. ಕೆನೆ ತೆಗೆದ, ಉಳಿದ ಹಾಲನ್ನು ತಿರುಗಿ ಒಕ್ಕಲಿಗರಿಗೆ ಕೊಡಲಾಗುವದು. ಬೆಣ್ಣೆ, ಗಿಣ್ಣ ಮೊದಲಾದವುಗಳನ್ನು ಯೋಗ್ಯ ಪೇಟೆಯಲ್ಲಿ, ಯೋಗ್ಯ ದರದಿಂದ ಮಾರುವ ಹೊಣೆಯನ್ನು, ಅನೇಕ ಕಾರಖಾನೆಗಳ ಪ್ರಾದೇಶಿಕ ಮಾಲು ಮಾರುವ ಸಂಸ್ಥೆಗಳ ( ಅಂದರೆ ರೀಜನಲ್ ಮಾರ್ಕೇಟಿಂಗ ಆರ್ಗನಾಯಿಝೇಶನ್ ) ಕಡೆಗೇನೇ ಒಪ್ಪಿಸಲ್ಪಟ್ಟಿರುವದು. ಕೆಲವೊಂದು ಕಾರಖಾನೆಗಳು ತಮ್ಮ ಮಾಲಿನ ಮಾರಾಟದ ವ್ಯವಸ್ಥೆಯನ್ನು ತಾವೇ ಮಾಡಿಕೊಳ್ಳುತ್ತವೆ.

# ಹಾಲು ಮಾರುವ ಸಂಸ್ಥೆಗಳು.

( ಮಾರ್ಕೇಟಿಂಗ ಆರ್ಗನಾಯಝೇಶನ್ಸ್ )

ಸ್ಥಾನಿಕ ಸಹಕಾರಿ ಸಂಸ್ಥೆಗಳು ಪ್ರಾದೇಶಿಕ ಅಥವಾ ಪ್ರಾಂತಿಕ ಮಾರ್ಕೇಟಿಂಗ ಸಂಸ್ಥೆಗಳನ್ನು ತಮ್ಮ ಸಲುವಾಗಿ ಸ್ಥಾಪಿಸಿ ಕೊಂಡು, ಅವುಗಳ ಮುಖಾಂತರ ಬೆಣ್ಣೆ, ಗಿಣ್ಣ, ಹಾಲು, ಗಟ್ಟಿ ಹಾಲು ಅಥವಾ ಹಾಲಿನ ಒಡೆಗಳನ್ನು ಮಾರುವ ವ್ಯವಸ್ಥೆ ಮಾಡಿಕೊಳ್ಳುತ್ತವೆ. ಸ್ಥಾನಿಕ ಕಾರಖಾನೆಗಳು ಇವುಗಳ ಸದಸ್ಯತ್ವವನ್ನು ವಹಿಸಿ ಇವುಗಳ ಶೇರು ( ಪಾಲು) ಗಳನ್ನು ಕೊಂಡು, ಶೇರರ ಬಂಡವಲವನ್ನು ಹೆಚ್ಚಿಸಲು ನೆರವಾಗುತ್ತವೆ. ಈ ಪ್ರಾದೇಶಿಕ ಅಥವಾ ಪ್ರಾಂತಿಕ ಮಾರ್ಕೇಟಿಂಗ ಸಂಸ್ಥೆಗಳ ಹೊಣೆಗಾರಿಕೆಯು ನಿಯಮಿತವಿರುವದು. ಆದರೆ ಇವುಗಳ ಸದಸ್ಯತ್ವವನ್ನು ವಹಿಸಿದ ಕಾರಖಾನೆಗಳ ಹೊಣೆಗಾರಿಕೆಯು ಕಾಯ್ದಿಟ್ಟ ಹೊಣೆಗಾರಿಕೆ ( Reserved liability ) ಯಿದೆ. ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ ನಿರ್ದೇಶಕ ಮಂಡಲವು ಈ ಸಂಸ್ಥೆಗಳ ಆಡಳಿತೆಯನ್ನು ನೋಡಿಕೊಳ್ಳುವದು. ತೀಕ್ಷ್ಣ ನಿಷ್ಣಾತ ಅನುಭವಿಕರಾದ, ಬಲ್ಲಿದರೂ ಬಲ್ಲವರೂ ಆದ ಹೆಚ್ಚಿನ ಸಂಬಳ ಪಡೆದ ನೌಕರದಾರರೂ ಇವುಗಳ ವ್ಯವಸ್ಥೆಯನ್ನು ವಹಿಸಿಕೊಳ್ಳುವರು. ಕಾರಖಾನೆಗಳಿಂದ ಕಳಿಸಲ್ಪಡುವ, ಹಾಲಿನಿಂದ ತಯಾರಾಗುವ ಎಲ್ಲ ವಸ್ತುಗಳನ್ನು ಕೊಂಡುಕೊಳ್ಳಲು ಈ ಸಂಸ್ಥೆಗಳು ಬದ್ಧವಾಗಿವೆ. ಮತ್ತು ಇವುಗಳ ಸಲುವಾಗಿ ಪರದೇಶಗಳಲ್ಲಿಯ ಪೇಟೆಗಳನ್ನು ಹುಡುಕುವ ಸಾಧ್ಯತೆಯ ಬಗೆಗೆ ಯಾವಾಗಲೂ ಸಾಹಸವನ್ನು ಕೈಕೊಳ್ಳುವವು. ಪರದೇಶಗಳ ಬೇಡಿಕೆಗಳಿಗೆ ಅನುಸರಿಸಿ ಹಾಲಿನಿಂದ ತಯಾರಾಗುವ ಬೇರೆ ಬೇರೆ ಪದಾರ್ಥಗಳನ್ನು ಉತ್ತಮವಾಗಿ ಕಲಾಪೂರ್ಣವಾಗಿ ಹೇಗೆ ಸಿದ್ಧಗೊಳಿಸಬೇಕೆಂಬ ಬಗೆಗೆ, ಇವು ಕಾರಖಾನೆಗಳಿಗೆ ಸಲಹೆ ಸೂಚನೆಗಳನ್ನು ನೀಡುವವು.

ನೆದರ್ಲಂಡಿನಲ್ಲಿಯ ಹನ್ನೊಂದು ಪ್ರಾಂತಗಳ ಸಲುವಾಗಿ, ಸಹಕಾರಿ ಹೈನದ ಕಾರಖಾನೆಗಳ ಎಂಟು ಪ್ರಾಂತಿಕ ಸಂಸ್ಥೆಗಳಿವೆ. ಬಹುತರವಾಗಿ ಎಲ್ಲ ಸಹಕಾರಿ ಹೈನದ ಕಾರಖಾನೆಗಳು ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿರುವ ಈ ಪ್ರಾಂತಿಕ ಸಂಸ್ಥೆಗಳ ಸದಸ್ಯತ್ವವನ್ನು ವಹಿಸಿವೆ. ಈ ಸಂಸ್ಥೆಗಳು ಅಂದರೆ

ಅಸೋಸಿಯೇಶನ್ನಗಳು ಬೆಣ್ಣೆ, ಗಿಣ್ಣಗಳ ತಪಾಸಣೆ ಮಾಡಿ, ಹೈನದವ್ಯವಸಾಯದಲ್ಲಿ ತಾಂತ್ರಿಕ ಸಲಹೆ ಸೂಚನೆಗಳನ್ನು ಕೊಡುವವು. ಅಲ್ಲದೆ ತರಬೇತಿ ವರ್ಗಗಳ ಏರ್ಪಾಡು ಮಾಡಿ, ಕಾರಖಾನೆಗಳಲ್ಲಿ ದುಡಿಯುವ ಜಾಣನೋಕರದಾರರ ಸಲುವಾಗಿ ಶಿಕ್ಷಣದ ಅನುಕೂಲತೆಯನ್ನು ಕಲ್ಪಿಸಿ ಕೊಡುವದಲ್ಲದೆ, ಪ್ರಯೋಗ ಪ್ರತ್ಯಕ್ಷಿಕೆಗಳನ್ನು ನಡೆಯಿಸುವವು. ಹೊಸ ಹೊಸ ಯಂತ್ರಗಳನ್ನು ಯಂತ್ರೋಪಕರಣಗಳನ್ನು ಕೊಳ್ಳುವಲ್ಲಿ, ಅವು ಸಲಹೆಸೂಚನೆಗಳನ್ನು ಕೊಟ್ಟು, ಯಂತ್ರಗಳ ವಿಷಯದಲ್ಲಿ ತಮಗಿರುವ ಜ್ಞಾನದ ಸೇವೆಯನ್ನು ಸಲ್ಲಿಸುವವು. ಸಮಾವೇಶವಾದ ಸಂಘಗಳ ಲೆಕ್ಕ ಪರಿಶೋಧನೆಯ ವ್ಯವಸ್ಥೆಯನ್ನು ಮಾಡುವವು. ಅವು ( **ಯುನಿಯನ್ನಗಳು** ) ನಿಯಮಗಳನ್ನು ಕಟ್ಟು ಕಟ್ಟಳೆಗಳನ್ನು ರಚಿಸಿ ಕಾಯದೆಯ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಉಪದೇಶವನ್ನು ಕೊಡುವವು. ಮತ್ತು ತಮ ತಮಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಹೈನದ ಕಾರಖಾನೆಗಳಮತ್ತು ಹೈನದವ್ಯವಸಾಯದ ಬೆಳವಣಿಗೆ ಮತ್ತು ಸುಧಾರಣೆಗಳು ಘಟಿಸುವ ಹಾಗೆ ಯತ್ನಿಸುವವು. ಹೈನದ ಕಾರಖಾನೆಗಳು ತಾವು ಮಾಡಿದ ವ್ಯವಹಾರದ ಪ್ರಮಾಣದ ಮೇಲೆ, ಈ ಅಸೋಸಿಯೇಶನ್ನಗಳ ವೆಚ್ಚದ ಸಲುವಾಗಿ ಕೆಲವೊಂದು ಹಣವನ್ನು ವರ್ಗಣಿ ರೂಪದಿಂದ ಸಲ್ಲಿಸುವವು. ಈ ಅಸೋಸಿಯೇಶನ್ನಗಳು, ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ, ವ್ಯವಸ್ಥಾಪಕ ಸಮಿತಿಯ ಮೇಲ್ವಿಚಾರಣೆಗೆ ಒಳಪಟ್ಟು, ತಮ್ಮ ಅನೇಕ ಕಾರ್ಯಕಲಾಪಗಳನ್ನು ನೋಡಿಕೊಳ್ಳುವ ಸಲುವಾಗಿ ಸಮರ್ಥರಾದ ನೋಕರದಾರರನ್ನು ನೇಮಿಸಿಕೊಳ್ಳುವವು.

ಅಸೋಸಿಯೇಶನ್ನಗಳ ಪ್ರಧಾನ ಕಚೇರಿಗೆ ಅಥವಾ ಸ್ಥಳಕ್ಕೆ ಕಾರಖಾನೆಗಳ ಮ್ಯಾನೇಜರರನ್ನು ಪ್ರತಿ ವಾರಕ್ಕೊಮ್ಮೆ ಕರೆಯಿಸಿಕೊಂಡ ಹಾಲಿನ ಪೂರೈಕೆಯ ಪರಿಸ್ಥಿತಿ, ಹಾಲಿನಿಂದ ತಯಾರಾಗುವ ವಸ್ತುಗಳ ಸಂಗ್ರಹದ ಪರಿಸ್ಥಿತಿ, ಈ ಮೊದಲಾದವುಗಳ ಬಗೆಗೆ, ಅವರ ಸಂಗಡ ಚರ್ಚೆ ಮಾಡಿ, ವಿಚಾರ ವಿನಿಮಯ ಮಾಡಿ, ಅಸೋಸಿಯೇಶನ್ನಗಳ ಅಧಿಕಾರಿಗಳು ಹಾಲನ್ನು ವಸ್ತುಗಳಿಗೆ ರೂಪಾಂತರಿಸುವ ವಿಷಯದಲ್ಲಿ, ಕಾರಖಾನೆಗಳ ಈ ಎಲ್ಲ ಮ್ಯಾನೇಜರರಿಗೆ ನಿಶ್ಚಿತವಾದ ಮತ್ತು ಸ್ಪಷ್ಟವಾದ ಸಲಹೆ ಸೂಚನೆಗಳನ್ನು ಕೊಡುವರು. ಈ ಮೇರೆಗೆ ಮಾರ್ಕೆಟಿಂಗ ಸಂಸ್ಥೆಗಳು

ಬೇರೆ ಬೇರೆ ಕಾರಖಾನೆಗಳ ಚಟುವಟಿಕೆಗಳೊಡನೆ ಸಂಬಂಧ ಬೆಳೆಯಿಸಿ ಪೂರೈಕೆಯನ್ನು ಬೇಡಿಕೆಗೆ ಮೇಳಗೂಡಿಸುತ್ತವೆ. ವರ್ಷಾಂತ್ಯಕ್ಕೆ ನಿವಳ ಲಾಭದೊಳಗಿಂದ ಕೆಲವೊಂದು ಭಾಗವನ್ನು ಕಾಯ್ದಿಟ್ಟ ನಿಧಿಗೆ ಒಯ್ದು, ಉಳಿಯುವನ್ನು ಸದಸ್ಯತ್ವವನ್ನು ವಹಿಸಿದ ಕಾರಖಾನೆಗಳಿಗೆ ಹಂಚಿ ಕೊಡಲಾಗುವದು. ಈ ಕಾರಖಾನೆಗಳೂ, ಈ ರೀತಿಯಿಂದ ಸಂಪಾದಿಸಿದ ಲಾಭವನ್ನು ತಿರುಗಿ ತಮ್ಮ ಒಕ್ಕಲಿಗರಲ್ಲಿ ಹಂಚುವವು.

‘ ಫ್ರಿಕೋ ’ ಎಂಬ ಸಂಕ್ಷಿಪ್ತ ಹೆಸರಿನಿಂದ ಪ್ರಸಿದ್ಧವಿರುವ ಫ್ರೀಜಿಸಿಯನ್ ಕೋ ಆಪರೇಟಿವ್ಹ ಡೇಅರಿ ಎಕ್ಸಪೋರ್ಟ ಅಸೋಸಿಯೇಶನ್ ನೆದರ್ಲಂಡಿನಲ್ಲಿಯೇ ಅತಿ ದೊಡ್ಡ ಸಹಕಾರಿ ನಿರ್ಯಾತ ಸಂಸ್ಥೆಯು. ಈ ಸಂಸ್ಥೆಯು ೧೨೪೦೦೦,೦೦೦, ಗಿಲ್ಡರುಗಳ ( ಅಂದರೆ ೧೫,೦೦೦೦೦೦೦-ರೂಪಾಯಿಗಳ ) ಬೆಲೆಯ ೩೫೦೦೦೦೦೦ ಕಿಲೋಗ್ರಾಮುಗಳಷ್ಟು ಹಾಲಿನಿಂದ ಸಿದ್ಧವಾಗುವ ಪದಾರ್ಥಗಳ ವ್ಯವಹಾರವನ್ನು ಮಾಡುತ್ತವೆ. ಇದು ಬೆಣ್ಣೆ, ಗಿಣ್ಣ, ಹಾಲಿನಪುಡಿ, ಹಾಲಿನ ಸುಟ್ಟ ಅಂದರೆ ಖವೆ ಈ ಮೊದಲಾದವುಗಳನ್ನು ನಿರ್ಯಾತ ಮಾಡುತ್ತವೆ. ಇಂದಿನವರೆಗೂ ನವ ನವ ಪ್ರಯೋಗ ಶೋಧಗಳಲ್ಲಿ ಮುಂದುವರಿದು ಗಟ್ಟಿಗೊಂಡ ದೊಡ್ಡ ದೊಡ್ಡ ಯಂತ್ರಗಳನ್ನು, ಮಾಲು ಗಾಡಿ ( ಟ್ರಕ್ಸ ) ಗಳನ್ನು, ಅಸಂಖ್ಯಾತ ವ್ಯಾನು(ದೊಡ್ಡ ಗಾಡಿ) ಮೊದಲಾದವುಗಳನ್ನು ಇಟ್ಟುಕೊಂಡಿವೆ. ಈ ಕಾರಖಾನೆಯ ಆಸ್ತಿಯು ೮೦೦೦೦೦೦ ಗಿಲ್ಡರಗಳ ( ಅಥವಾ ೧೦೦,೦೦೦೦೦ ರೂಪಾಯಿಗಳ ) ಬೆಲೆಯದಿದೆ.

ಹೇಗ ಪಟ್ಟಣದಲ್ಲಿ, ತನ್ನ ಪ್ರಧಾನ ಕಚೇರಿಯನ್ನಿಟ್ಟುಕೊಂಡಿರುವ ನ್ಯಾಶನಲ್ ಫೇಡರೇಶನ್ ಆಫ್ ಕೋ ಆಪರೇಟಿವ್ಹ ಮಾರ್ಕೆಟಿಂಗ ಆರ್ಗನಾಯಝೇಶನ್ಸಿಗೆ ಅಂದರೆ ಸಹಕಾರಿ ಮಾರ್ಕೆಟಿಂಗ ಸಂಸ್ಥೆಗಳ ರಾಷ್ಟ್ರೀಯ ಸಂಯುಕ್ತ ಸಂಸ್ಥೆಗೆ, ಏಳು ಸಹಕಾರಿ ಮಾರ್ಕೆಟಿಂಗ ಸಂಸ್ಥೆಗಳು ಸಮಾವೇಶವಾಗಿವೆ. ಇದು ಬಿಸ್ ವ್ಯಾಪಾರೀ ಸಂಸ್ಥೆಯು ಇದು ತನ್ನ ಸಭಾಸದರ ಸರ್ವಸಾಮಾನ್ಯ ಹಿತದ ಕಡೆಗೆ ಲಕ್ಷ್ಯ ಪೂರೈಸುವದಲ್ಲದೆ, ನಿರ್ಯಾತ ವ್ಯವಹಾರದಿಂದುಂಟಾಗುವ ಅನೇಕ ಸಮಸ್ಯೆಗಳನ್ನು ಬಿಡಿಸಲು ಯತ್ನಿಸುತ್ತಿದೆ. ಪ್ರತಿ ವರ್ಷಕ್ಕೊಮ್ಮೆ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ

ನಿರ್ದೇಶಕ ಮಂಡಳವು ಇವರ ವ್ಯವಹಾರದ ವ್ಯವಸ್ಥೆಯನ್ನು ಮೇಲ್ವಿಚಾರಣೆಯನ್ನು ಮಾಡುತ್ತವೆ. ಇವಕ್ಕೆ ಸಮಾವೇಶವಾದ ಏಳು ಮಾರ್ಕೆಟಿಂಗ ಸಂಸ್ಥೆಗಳು ತಾವು ಮಾಡಿದ ಒಟ್ಟು ವ್ಯವಹಾರದ ಪ್ರಮಾಣದ ಮೇಲೆ, ಆಧಾರದ ಮೇಲೆ, ಈ ಸಂಸ್ಥೆಯ ಆಡಳಿತೆಯ ಖರ್ಚಿಗಾಗಿ ವರ್ಗಣಿಯನ್ನು ಸಲ್ಲಿಸುತ್ತವೆ.

ಫ್ರೀಜ್‌ಲಂಡ ಪ್ರಾಂತದಲ್ಲಿಯ ಕೋಆಪರೇಟಿವ್ಹ ಕಂಡೆನ್ಸಡ ಫ್ಯಾಕ್ಟರಿಯು ಅಂದರೆ ಹಾಲನ್ನು ಗಟ್ಟಿಗೊಳಿಸುವ ಸಹಕಾರಿ ಕಾರಖಾನೆಯೂ ಬಹು ಪ್ರಸಿದ್ಧವಾದುದು. ಎಪ್ಪತ್ತೊಂದು ಸಹಕಾರಿ ಹೈನದ ಕಾರಖಾನೆಗಳು ಇದರ ಸದಸ್ಯತ್ವವನ್ನು ವಹಿಸಿವೆ. ಯುದ್ಧಪೂರ್ವದಲ್ಲಿ ಈ ಕಾರಖಾನೆಗಳಲ್ಲಿ ೭೦೦೦೦೦೦೦ ಕಿಲೋಗ್ರಾಮುಗಳಷ್ಟು ಹಾಲು ಪ್ರತಿವರ್ಷ ಗಟ್ಟಿಯಾಗಿ ಮಾರಾಟಕ್ಕೆ ಸಿದ್ಧವಾಗುತ್ತಿದ್ದಿತು. ದೇಶದಲ್ಲಿಯ ಅತಿ ದೊಡ್ಡ-ಅತ್ಯುತ್ತಮ ಕಾರಖಾನೆಗಳಲ್ಲಿ ಇದೊಂದಾಗಿದೆ. ಈ ಕಾರಖಾನೆಯ ಒಟ್ಟು ಆಸ್ತಿಯು ೧೦,೦೦೦೦೦೦ ಗಿಲ್ಡರಗಳ ಅಂದರೆ ೧,೩೫,೦೦೦೦೦ ರೂಪಾಯಿಗಳ ಬೆಲೆಯದಾಗುವದು.

## ನ್ಯಾಶನಲ್ ಡೇಅರಿ ಯುನಿಯನ್

### ( ರಾಷ್ಟ್ರೀಯ ಹೈನದ ಸಂಯುಕ್ತ ಸಂಸ್ಥೆ )

'ರಾಯಲ್ ನೆದರ್ಲಂಡ್ಸ ಡೇಅರಿ ಫೇಡರೇಶನ್' ಎಂಬ ಹೆಸರಿನಿಂದ ಪ್ರಸಿದ್ಧವಿರುವ ನೆದರ್ಲಂಡಿನ ಹೈನದ ಸಂಯುಕ್ತ ಸಂಸ್ಥೆ (ಯುನಿಯನ್ನಿಗ) ಎಂಟು ಅಸೋಸಿಯೇಶನ್ನುಗಳು ಸಮಾವೇಶವಾಗಿವೆ. ಇದರ ಪ್ರಧಾನ ಕಚೇರಿಯು ಹೇಗ ಪಟ್ಟಣದಲ್ಲಿದ್ದು, ೧೯೦೧ರಲ್ಲಿ ಸ್ಥಾಪಿತವಾಗಿದೆ. ಕೆಳಗಿನ ಕಾರ್ಯಕ್ರಮಗಳನ್ನು ಚಟುವಟಿಕೆಗಳನ್ನೂ ಕೈಕೊಂಡು ನೆದರ್ಲಂಡಿನಲ್ಲಿಯ ಸಹಕಾರಿ ಹೈನದ ವ್ಯವಸಾಯವನ್ನು ಬೆಳೆಯಿಸುವದೇ ಈ ಸಂಸ್ಥೆಯ ಉದ್ದೇಶವಾಗಿದೆ.

(೧) ಫೆಡರಲ್ ಅಸೋಸಿಯೇಶನ್ನಿನ ಅಂದರೆ ಸಂಯುಕ್ತ ಸಂಸ್ಥೆಯ ಪ್ರಗತಿಯನ್ನು ಸಾಧಿಸುವ ದೃಷ್ಟಿಯಿಂದ, ಎಲ್ಲ ವಿಷಯಗಳಲ್ಲಿ ಪರಸ್ಪರ ಸಲಹೆ ಮತ್ತು ಸಂಯುಕ್ತ ಸಂಸ್ಥೆಯ ತತ್ವಗಳ ಆಧಾರದ ಮೇಲೆ ನಿರ್ಮಿತವಾದ ಸಹಕಾರ.

(೨) ಹೈನದ ವ್ಯವಸಾಯವನ್ನೂ, ಹೈನದ ಕಾರಖಾನೆಗಳನ್ನೂ ಸರ್ವಾಂಗೀಣ ರೀತಿಯಲ್ಲಿ ಸುಧಾರಿಸಲು, ಸಹಕಾರಿ ಸಂಘಗಳಿಗೆ ಒತ್ತಾಯ.

(೩) ಹೈನದ ಪದಾರ್ಥಗಳನ್ನು ತಯಾರಿಸುವ ಕ್ರಮವಲ್ಲಿ, ಅವುಗಳನ್ನು ಮಾರುವ ವ್ಯವಹಾರದಲ್ಲಿ ಘಟಿಸಬಹುದಾದ ತಸಲು ಪದ್ಧತಿಗಳನ್ನು ಕಪಟತನದ ರೀತಿಗಳನ್ನು ಕಂಡುಹಿಡಿದು, ಅವುಗಳ ನಿವಾರಣೆಗೆ ಹೋರಾಡುವದು.

(೪) ಹೈನದ ಕಾರಖಾನೆಯ ವಿವಿಧ ಶಾಖೆಗಳಲ್ಲಿ ದುಡಿಯುವವರಿಗೆ ತಮ್ಮ ಕರ್ತೃತ್ವಶಕ್ತಿಯಿಂದ, ಸ್ಪರ್ಧೆವಹಿಸಿ ಪ್ರಮಾಣ ಪತ್ರ ಪಡೆಯಲು ಸಂಧಿಯನ್ನೊದಗಿಸಿ ಕೊಡುವದು.

(೫) ಹೈನದ ವ್ಯವಹಾರ ಕ್ಷೇತ್ರಕ್ಕೆ ಸಂಬಂಧಿಸಿದ ಅಂಕಿಸಂಖ್ಯೆಗಳನ್ನು ಕಲೆಹಾಕಿ, ಪ್ರಕಟಿಸುವದು.

(೬) ಹೈನದ ಉದ್ಯೋಗಕ್ಕೆ ಸಂಬಂಧಿಸಿದ ವಾರಪತ್ರಿಕೆಗಳನ್ನೂ ಮತ್ತಿತರ ಪ್ರಕಟನೆಗಳನ್ನೂ ಪ್ರಚಾರಗೊಳಿಸುವದು.

ನ್ಯಾಶನಲ್ ಮಾರ್ಕೆಟಿಂಗ ಕೋಆಪರೇಟಿವ್ಹ ಆರ್ಗನಾಯಝೇಶನ್ ಅಂದರೆ ರಾಷ್ಟ್ರೀಯ ಮಾರ್ಕೆಟಿಂಗ ಸಹಕಾರಿ ಸಂಸ್ಥೆಯೂ ಮತ್ತು ನೆದರ್ಲಂಡ್ಸ ಡೇಅರಿ ಫೇಡರೇಶನ್ ಅಂದರೆ ನೆದರ್ಲಂಡಿನ ಹೈನದ ಸಂಯುಕ್ತ ಸಂಸ್ಥೆಯೂ ನ್ಯಾಶನಲ್ ಕೌನ್ಸಿಲಿಗೆ ಸಮಾವೇಶವಾಗಿವೆ. ಈ ಎರಡೂ ಸಂಸ್ಥೆಗಳಲ್ಲಿ ಪರಸ್ಪರ ಸ್ನೇಹ ಸಂಬಂಧವಿದೆ. ಮಾರ್ಕೆಟ್ಟಿಗೆ ಅಂದರೆ ವ್ಯವಹಾರಕ್ಕೆ ಸಂಬಂಧಪಟ್ಟ ಸಮಸ್ಯೆಗಳ ವಿಚಾರವನ್ನು ಒಂದು ಸಂಸ್ಥೆಯು ಮಾಡುತ್ತಿದ್ದರೆ, ಇನ್ನೊಂದು ಆಪಳಿತೆಗೆ ಸಂಬಂಧಪಟ್ಟ ಸಮಸ್ಯೆಗಳ ವಿಚಾರ ಮಾಡುತ್ತದೆ.

## ಮಿಲ್ಕ ಮಾರ್ಕೆಟಿಂಗ ಬೋರ್ಡ

### (ಹಾಲು ಮಾರುವ ಮಂಡಳ)

ಸರಕಾರದವರು ಮಿಲ್ಕ ಮಾರ್ಕೆಟಿಂಗ ಬೋರ್ಡನ್ನು ಸಂಸ್ಥಾಪಿಸಿದು ಅದಕ್ಕೆ ಸಹಕಾರಿ ಹೈನದ ಸಂಸ್ಥೆಗಳೂ ಅದರಂತೆಯೇ ಖಾಸಗಿ ಹೈನದ ಸಂಸ್ಥೆಗಳು ತಮ್ಮ ತಮ್ಮ ಪ್ರತಿನಿಧಿಗಳನ್ನು ಕಳಿಸುತ್ತವೆ. ಪ್ರತಿವರ್ಷ ಸರಕಾರದವರು, ಹಾಲಿನಿಂದ ತಯಾರಾಗುವ ಪದಾರ್ಥಗಳಿಗೆ ತಗಲುವ

ವೆಚ್ಚವನ್ನು ಲಕ್ಷಕ್ಕೆ ತಂದು, ಹಾಲಿನ ಪದಾರ್ಥಗಳ ಅದರಂತೆಯೇ ಸ್ಥಾನಿಕ ಜನರ ಬಳಕೆಗಾಗಿ ಉಪಯೋಗಿಸಲ್ಪಡುವ ಹಾಲಿನ ಮಾರಾಟದ ತೀರ ಕಡಿಮೆ ಬೆಲೆಯೆಂದರೆ ಎಷ್ಟಿರಬೇಕೆಂಬುದನ್ನು ಸರಕಾರವು ನಿರ್ಧರಿಸುವದು. ಪರದೇಶದ ಪೇಟೆಗಳಿಗೆ ಕಳುಹಲ್ಪಡುವ ಹಾಲಿನ ಪದಾರ್ಥಗಳ ಮಾರಾಟದ ಬೆಲೆಗಿಂತ ಸ್ಥಳಿಕ ಜನತೆಯು ಬಳಸುವ ಹಾಲಿನ ಮಾರಾಟದ ಬೆಲೆಯು ವಾಡಿಕೆಯಾಗಿ ಕಡಿಮೆಯಿರುವದು. ಮೊದಲು ಸ್ಥಳಿಕ ಜನರ ಕೊರತೆಯು ಪೂರೈಸಲ್ಪಡುವ ಹಾಗೆ ಸರಕಾರವು ದಕ್ಷತೆಯನ್ನು ವಹಿಸುತ್ತದೆ. ಸರಕಾರವು ನಿರ್ಧರಿಸಿದ ತೀರ ಕಡಿಮೆ ಬೆಲೆಯ ಪ್ರಮಾಣಕ್ಕಿಂತ ಹೆಚ್ಚಿನ ದರದಿಂದ ಪರದೇಶಗಳಿಗೆ ಹಾಲಿನ ಪದಾರ್ಥಗಳನ್ನು ಮಾರುವ ಒಕ್ಕಲಿಗನ ಮೇಲೆ ಕರಹೇರಿ, ಪರ್ಯಾಯದಿಂದ ಪರದೇಶಗಳಿಗೆ ಅನೇಕ ರೂಪದಲ್ಲಿ ಹರಿದು ಹೋಗುವ ಹಾಲಿನ ಪ್ರವಾಹವನ್ನು ಸ್ವಕೀಯ ಜನತೆಯ ಬಳಕೆಗಾಗಿ ತಿರುಗಿಸುವ ವ್ಯವಸ್ಥೆ ಮಾಡುತ್ತದೆ. ಈ ದೇಶದ ಸರಕಾರವು, ಹಾಲಿನ ವ್ಯವಹಾರದ ಪ್ರಮಾಣದ ಮೇಲೆ ಪ್ರತಿಯೊಬ್ಬ ಒಕ್ಕಲಿಗನಿಂದಲೂ ವರ್ಗಣಿಯನ್ನು ವಸೂಲ ಮಾಡಲಾಗುವದು. ಮಿಲ್ಕ ಮಾರ್ಕೆಟ್ ಬೋರ್ಡು ಈ ರೀತಿ ಕಲೆಹಾಕಲ್ಪಟ್ಟ ವರ್ಗಣಿಯನ್ನು ಉಪಯೋಗಿಸುವದು. ಈ ವರ್ಗಣಿ ನಿಧಿಯ ಮುಖ್ಯ ಉದ್ದೇಶವು, ಹಾಲಿನ ಮತ್ತು ಅದರಿಂದ ತಯಾರಾಗುವ ಪದಾರ್ಥಗಳ ಬೆಲೆಗೆ ಒಂದು ಬಗೆಯ ಸ್ಥಿರತೆಯನ್ನು ಕೊಡುವದಾಗಿದೆ. ಹಾಲಿನಿಂದ ತಯಾರಾಗುವ ಪದಾರ್ಥಗಳು ಸರಕಾರದವರು ಗೊತ್ತುಪಡಿಸಿದ ತೀರ ಕಡಿಮೆ ಬೆಲೆಗಿಂತ ಕಡಿಮೆಯ ಬೆಲೆಗೆ ಮಾರಲ್ಪಟ್ಟರೆ, ಒಕ್ಕಲಿಗರಿಗೆ ಈ ವರ್ಗಣಿ ನಿಧಿಯೊಳಗಿಂದ, ಹಾನಿಯನ್ನು ತುಂಬಿಕೊಡಲಾಗುವದು. ಹಾಲಿನಿಂದ ಸಿದ್ಧವಾಗುವ ಪದಾರ್ಥಗಳು ಮೂಲಬೆಲೆಗೆ ಮಾರಲ್ಪಡದಿದ್ದಾಗ, ಸರಕಾರದವರು ಈ ಪದಾರ್ಥಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಪರದೇಶದ ಪೇಟೆಗಳಲ್ಲಿ ಕಡಿಮೆ ಬೆಲೆಗಾದರೂ ಮಾರಿ, ಕಾರಖಾನೆಗಳಿಗುಂಟಾದ ಹಾನಿಯನ್ನು ಈ ವರ್ಗಣಿ ನಿಧಿಯೊಳಗಿಂದ ಭರತಿಮಾಡುವದು. ಈ ನಿಧಿಯೆಲ್ಲ ತೀರಿಹೋದರೆ, ಸರಕಾರದವರು ಸಾರ್ವಜನಿಕ ನಿಧಿಯೊಳಗಿಂದ ಹಾನಿಯನ್ನು ತುಂಬಿಕೊಡುವರು. ಒಕ್ಕಲಿಗನೇ ಆಗಲಿ, ಕಾರಖಾನೆಯೇ ಆಗಲಿ ಸರಕಾರದವರು ಗೊತ್ತುಪಡಿಸಿದ ತೀರ ಕಡಿಮೆ ಬೆಲೆಯ ಪ್ರಮಾಣಕ್ಕಿಂತ ಕಡಿಮೆಯ

ಬೆಲೆಗೆ ಪರದೇಶಕ್ಕೆ ತಮ್ಮ ಮಾಲನ್ನು ಮಾರಲಿಕ್ಕೆ ಸರಕಾರದವರು ಅಪ್ಪಣೆಯನ್ನು ಕೊಡುವದಿಲ್ಲ.

## ಅಧೀನ ಸಹಕಾರಿ ಸಂಸ್ಥೆ

ಈ ಮೊದಲೇ ವಿವರಿಸಿದಂತೆ ಇಲ್ಲಿ ದನಗಳನ್ನು ದನಗಳ ಮಾಂಸವನ್ನು ಮಾರುವ ಸಹಕಾರಿ ಕಟಕರ ಮನೆಗಳು ಉಂಟು. ದನಗಳಿಗೆ ಅಗತ್ಯವಿರುವ ಪೋಷಕ ಪದಾರ್ಥಗಳನ್ನು ತಯಾರಿಸುವ ಸಹಕಾರಿ ಕಾರಖಾನೆಗಳೂ ಉಂಟು. ಹಾನಿಯನ್ನು ತುಂಬಿಕೊಡುವ ವೃಷ್ಟಿಯಿಂದ ದನಗಳ ವಿಮೆ ಇಳಿಸುವ ಸಹಕಾರೀ ವಿಮಾ ಸಂಸ್ಥೆಗಳೂ ಉಂಟು. ದನಗಳ ಸಂಗೋಪನ ಸಂಘಗಳು ದನಗಳ ಸಂಗೋಪನೆಯನ್ನು ಉತ್ತಮ ರೀತಿಯಿಂದ ನಿರ್ವಹಿಸುವಲ್ಲಿ ಒಕ್ಕಲಿಗರಿಗೆ ನೆರವಾಗುತ್ತವೆ. ವಾಡಿಕೆಯಾಗಿ ಒಕ್ಕಲಿಗರು ಆಕಳುಗಳನ್ನು ಕೊಳ್ಳದೇ ಅವುಗಳ ತಳಿಯನ್ನು ಬೆಳೆಯಿಸುವರು. ದನಕರುಗಳನ್ನು ಕೊಳ್ಳುವ ಪ್ರಸಂಗ ಬಂದಾಗ ಸ್ಥಾನಿಕ ಸಹಕಾರಿ ಬ್ಯಾಂಕುಗಳು ಒಕ್ಕಲಿಗರಿಗೆ ಧನ ಸಹಾಯವನ್ನೊದಗಿಸುತ್ತವೆ.

ದನಕರುಗಳ ಬೆಳವಣಿಗೆಯು ಸಂಗೋಪನೆಯು ಸಂವರ್ಧನೆಯು ಮತ್ತು ಹೈನದ ವ್ಯವಸಾಯದ ವಿಕಾಸದ ಉದ್ಯೋಗಗಳೆಲ್ಲವೂ ಪೂರ್ತಿಯಾಗಿ ಸಹಕಾರ ತತ್ವಗಳ ಮೇಲೆ ರಚಿತವಾಗಿ ಸಹಕಾರದ ಆಧಾರದ ಮೇಲೆಯೇ ಸಾಗುತ್ತವೆ. ಉತ್ಪತ್ತಿಯಿಂದ ಮಾರಾಟದವರೆಗೆ ವ್ಯವಹಾರವನ್ನು ಕೈಕೊಂಡ ಸಂಸ್ಥೆಗಳು ಬಲುಮೆ ಜುಲುಮೆಗಳಿಲ್ಲದೆ, ಸ್ವಾಭಾವಿಕವಾಗಿ ಸಂತೋಷದಿಂದ ನಿರ್ಮಿತವಾಗಿದ್ದು ಒಕ್ಕಲಿಗರ ವಶದಲ್ಲಿರುವವು. ಪ್ರಜಾಸತ್ತಾತ್ಮಕ ತತ್ವದ ಮೇಲೆ ಅವುಗಳ ಆಡಳಿತೆಯು ಸಾಗುವದು. ಹೈನದ ವ್ಯವಸಾಯದ ವಿಕಾಸಕ್ಕೂ ಡಚ್ಚ ಒಕ್ಕಲಿಗನ ಉತ್ಕರ್ಷಕ್ಕೂ ಪ್ರಮುಖವಾಗಿ ಸಹಕಾರ ತತ್ವಗಳ ಮೇಲೆ ಸ್ವಸಂತೋಷದಿಂದ ರಚಿತವಾಗುವ ಒಕ್ಕಲಿಗರ ಸಂಸ್ಥೆಗಳ ಸಂಸ್ಥಾಪನೆಯೇ ಕಾರಣವಾಗಿದೆ. ಈ ಮೇರೆಗೆ, ಸಹಕಾರಿ ಸಂಘಗಳ ಸಹಾಯದಿಂದ ಉತ್ತಮ ಬೇಸಾಯವೂ, ಉತ್ತಮ ಬೇಸಾಯದ ಮುಖಾಂತರವಾಗಿ ಉತ್ತಮ ಜೀವನವೂ ನೆದರ್ಲಂಡಿನಲ್ಲಿ ಸಾಧಿಸಿದೆ.

ಬರಿ ಒಂದೆರಡು ಆಕಳುಗಳನ್ನು ಸಾಕಿದ ಒಬ್ಬ ಸಣ್ಣ ಒಕ್ಕಲಿಗನಿಗೂ ಪೇಟೆಯ ಭರವಸೆಯಿದ್ದು, ಪೇಟೆಯಲ್ಲಿ ಪರ್ಯಾಯದಿಂದ ದೊರೆ-

ಯುವ ಉತ್ತಮ ಬೆಲೆಯ ಭರವಸೆಯೂ ಇರುವದು. ದನಕರುಗಳ ಮಾರಾಟದ ದನಕರುಗಳಿಂದ ಮತ್ತು ಅವುಗಳ ಹೈನದಿಂದ ತಯಾರಾಗುವ ಪದಾರ್ಥಗಳ ಮಾರಾಟದ ವ್ಯವಹಾರವನ್ನು ಕೈಕೊಳ್ಳುವ ದಲಾಲಿಗಳ ಸರಪಳಿಯು ಹರಿದು ಹೋಗಿದೆ. ಅಲ್ಲದೆ, ಈ ಎಲ್ಲ ವ್ಯವಹಾರಗಳಿಂದ ದಲಾಲಿಗಳು ತಿನ್ನುವ ಲಾಭಗಳಿಗೆ ಒಕ್ಕಲಿಗರು ಪಾಲುಗಾರರಾಗಿರುವರು. ಇದರಿಂದ ಸಾಂಘಿಕ ಭಾವನೆಯೂ, ಸಾಂಘಿಕ ಜೀವನವೂ ಸಾಕಷ್ಟು ಮಟ್ಟಿಗೆ ವಿಕಾಸಗೊಂಡಿವೆ. ತಮ್ಮ ಕರ್ತೃತ್ವ ಶಕ್ತಿಯಿಂದ ತಮ್ಮ ಹಣೆಯಬರಹವನ್ನು ತಾವೇ ಬರೆದುಕೊಳ್ಳಲು ಸಮರ್ಥರಾಗಿರುವದರಿಂದ ಒಕ್ಕಲಿಗರಿಗೆ ಒಂದು ಬಗೆಯ ಅಭಿಮಾನವೆನಿಸುತ್ತದೆ. ಸದ್ಯಕ್ಕೆ ಈ ಒಕ್ಕಲಿಗರು ಕೋಟ್ಯಾವಧಿ ರೂಪಾಯಿ ಬೆಲೆಬಾಳುವ ಕಾರಖಾನೆಗಳ ಒಡೆಯರಾಗಿದ್ದಾರೆ. ಮಿತವ್ಯಯವು ಅವರ ಜೀವನದ ಧಾಟಿಯಾಗಿದೆ. ತಾವು ತಯಾರಿಸಿದ ಪದಾರ್ಥಗಳು ಪೇಟೆಯಲ್ಲಿ ಹೇಗೆ ಮಾರಾಟವಾಗಬಹುದೆಂಬ, ಜಂಡಿಯಿಂದ ಮತ್ತು ಯಾಂತ್ರಿಕ ಮತ್ತು ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಕಾಳಜಿಯಿಂದ ಅವರು ಮುಕ್ತರಾಗಿರುವರು. ಅವರಿಗಿರುವ ಒಂದೇ ಒಂದು ಚಿಂತೆಯೆಂದರೆ ಉತ್ಪಾದನೆಯ ಹೆಚ್ಚಳ, ಶ್ರಿಸ್ಮತಿ ಅಷ್ಟೇ! ಉತ್ತಮವಾದ ರೀತಿಯಲ್ಲಿ ಹಾಲಿನ ಉತ್ಪತ್ತಿಯು ಹೆಚ್ಚಾಗುವಂತೆ ನೋಡಿಕೊಳ್ಳುವದೇ ಅವರ ಕರ್ತವ್ಯವು. ಅವರ ಇತರ ವ್ಯವಹಾರಗಳ ಬದಿಗಳನ್ನು ಸಹಕಾರ ತತ್ವಗಳ ಮೇಲೆ ರಚಿತವಾದ ಅವರ ಸ್ವಂತ ಸಂಸ್ಥೆಗಳು ನೋಡಿಕೊಳ್ಳುವವು.

ನಮ್ಮ ಭಾರತದಲ್ಲಿಯೇ, ಅನೇಕ ಕಾರಣಗಳ ಮೂಲಕ ಒಕ್ಕಲುತನದ ಉತ್ಪನ್ನವು ತೀರ ಕೆಳಮಟ್ಟದಲ್ಲಿದೆ. ಮೇಲೆ ವಿವರಿಸಿದ ರೀತಿಯಲ್ಲಿ ಇಲ್ಲಿಯೂ ದನಕರುಗಳ ಸಂಗೋಪನೆ ಸಂವರ್ಧನೆಯ ಮತ್ತು ಹೈನದ ವ್ಯವಸಾಯ ವಿಕಾಸದ ಯೋಜನೆಗಳನ್ನು ಕಾರ್ಯಗಳನ್ನು ಕೈಕೊಳ್ಳುವದಾದರೆ, ಒಕ್ಕಲಿಗನ ಸಾಂಪತ್ತಿಕ ಸ್ಥಿತಿಯು ಸುಧಾರಿಸಿ, ಅವನಿಗೆ ನಿಶ್ಚಿತ ಉತ್ಪನ್ನದ ಭರವಸೆಯಾಗಿ, ದೇಶದ ಗೋಸಂಪತ್ತು ಅಭಿವೃದ್ಧಿಯಾಗುವದಲ್ಲದೆ, ಹಳ್ಳಿ ಪಟ್ಟಣಗಳೆರಡಕ್ಕೂ ಜನತೆಯ ಆರೋಗ್ಯಕ್ಕೂ ಕಲ್ಯಾಣಕ್ಕೂ ಅತ್ಯವಶ್ಯವಾದ, ಉತ್ತಮ ಹಾಲಿನ, ಮತ್ತು ಹಾಲಿನಿಂದ ಸಿದ್ಧವಾದ ಪದಾರ್ಥಗಳ ಪೂರೈಕೆಯ ಭರವಸೆಯಾಗಿ, ತುಷ್ಟಿ, ಪುಷ್ಟಿಗಳು ನೆಲೆದಾಗದಿರುವವೇ !

# ೫ ಒಕ್ಕಲಿಗರ ಹುಟ್ಟುವಳಿಯ ಮಾರಾಟಕ್ಕಾಗಿ ಡಚ್ಚರ ಲಿಲಾವಿನ ಪೇಟೆಯ ಸ್ಥಳ (ವಳಿಗೆ)

## ( ಡಚ್ಚ ಆ್ಯಕ್ಶನ ಮಾರ್ಟ )

ನೆದರ್ಲಂಡ್ಜಿನಲ್ಲಿ ಸುಮಾರು ೩೬೧೫೦ ತೋಟಗಳಿದ್ದು, ಸುಮಾರು ೧, ೧೬, ೪೭೭ ಎಕರೆಗಳ ಭೂಮಿಯು ತೋಟದ ವ್ಯವಸಾಯಕ್ಕಾಗಿ ಉಪಯೋಗಿಸಲ್ಪಡುತ್ತಿವೆ. ಅಂದರೆ ದೇಶದಲ್ಲಿಯ ಸಾಗುವಳಿ ಮಾಡಲ್ಪಡಬಹುದಾದ ಒಟ್ಟು ಭೂಕ್ಷೇತ್ರದಲ್ಲಿ ನೂರಕ್ಕೆ ೩೦೭ ರಷ್ಟು ಭೂಮಿಯು ತೋಟದ ವ್ಯವಸಾಯದಿಂದ ಹಸಿರು ಮುರಿಯುತಿದೆ. ಹಣ್ಣು-ಹಂಪಲು, ಕಾಯಿಪಲ್ಲೆ, ಹೂಮಗ್ಗಿಗಳಂತಹ ತೋಟದ ಹುಟ್ಟುವಳಿಯಲ್ಲಿ ಪ್ರತಿ ವರ್ಷ ಸುಮಾರು ೪೨೨,೦೦೦೦೦೦ ಗಿಲ್ಡರುಗಳ ಬೆಲೆಯಷ್ಟು ( ಅಂದರೆ ೫೦೦,೦೦೦೦೦೦ ರೂಪಾಯಿಗಳ ಬೆಲೆಯಷ್ಟು ) ಹುಟ್ಟುವಳಿಯು ನಿರ್ಯಾತವಾಗುತ್ತವೆ. ಬುರಡೆ ಹೂವೊಂದರ ( Bulb flower ) ವಾರ್ಷಿಕ ನಿರ್ಯಾತವೇ ೧೫೦೦೦೦೦೦೦ ರೂಪಾಯಿಗಳವರೆಗಾಗುತ್ತದೆ.

ಹಣ್ಣು-ಹಂಪಲ, ಕಾಯಿಪಲ್ಲೆ, ಬುರಡೆ ಹೂವುಗಳಂತಹ, ಬೇಗನೇ ಕೆಟ್ಟು ಹೋಗುವ ಪದಾರ್ಥಗಳನ್ನು ಮಾರುವ ಒಂದು ವಿಶಿಷ್ಟ ಪದ್ಧತಿಯು ಈ ದೇಶದಲ್ಲಿ ನೆಲೆಗೊಂಡಿದೆ. ಇವುಗಳ ವ್ಯಾಪಾರವೊಂದರಿಂದಲೇ ದೇಶಕ್ಕೆ ಸುಮಾರು ಐವತ್ತು ಕೋಟಿ ರೂಪಾಯಿಗಳ ಉತ್ಪನ್ನವು ಬರುತ್ತದೆ. ಈ ಪದ್ಧತಿಯು ಮುಖ್ಯವಾಗಿ ಸಹಕಾರ ತತ್ವಗಳ ಆಧಾರದ ಮೇಲೆ ರಚಿತವಾಗಿದೆ. ೧೮೮೭ರ ಪೂರ್ವದಲ್ಲಿ ಸಾರ್ವಜನಿಕ ಪೇಟೆಗಳಲ್ಲಿ ಈ ಬಗೆಯ ಪದಾರ್ಥಗಳ ಮಾರಾಟವಾಗುತ್ತಿದ್ದಿತು. ಅಂದಿನಿಂದ ಲಿಲಾವು ಮಾಡುವ ಪದ್ಧತಿಯು ಪ್ರಚಾರದಲ್ಲಿದೆ! ಮಾಲನ್ನು ಗುತ್ತಿಗೆಯಿಂದ ( ಅಂದರೆ ಠೋಕಗಟ್ಟಲೆ ) ಕೊಳ್ಳುವವರು, ಚಿಲ್ಲರೆ ಕೊಳ್ಳುವವರು, ಕೊಂಡು ಪರದೇಶಕ್ಕೆ ಕಳಹುವವರು-ಎಲ್ಲರೂ ಈ ಪದಾರ್ಥಗಳ ಲಿಲಾವಿನ ಸಮಯಕ್ಕೆ "ಹಣ್ಣು-ಹಂಪಲ,

ಕಾಯಿಸಲ್ಲಿ, ಹೂ ಮೊದಲಾದವುಗಳನ್ನು ಕೊಳ್ಳುವವರ ಸಲುವಾಗಿ ಲಿಲಾವಿನ ಪೇಟೆಗಳೆಂದು” ಹೆಸರು ಪಡೆದ ಉತ್ಪಾದಕರ ಸಂಸ್ಥೆಗಳ ಕಡೆಗೆ ಹೋಗುವರು. ಸದ್ಯಕ್ಕೆ ೧೬೦ ಲಿಲಾವಿನ ಪೇಟೆ (ಸ್ಥಳ)ಗಳಿವೆ. ಕೇವಲ ಏಳು ಲಿಲಾವಿನ (ಪೇಟೆಗಳು) ಖಾಸಗಿಯವಿರುವವು. ಒಟ್ಟು ಹುಟ್ಟುವಳಿಯಲ್ಲಿ ನೂರಕ್ಕೆ ೯೦ರಷ್ಟು ಸಹಕಾರಿ ಸಂಸ್ಥೆಗಳ ಮುಖಾಂತರ ಲಿಲಾವಾಗುತ್ತದೆ.

## ಲಿಲಾವಿನ ಪೇಟೆಗಳು

ಹುಟ್ಟುವಳಿಯನ್ನು ಬೆಳೆಯುವವರಿಂದ ಸಹಕಾರಿ ಲಿಲಾವಿನ ಪೇಟೆಯು ಅಪರಿಮಿತ ಹೊಣೆಗಾರಿಕೆಯ ಮೇಲೆ ರಚಿತವಾಗಿರುವದು. ಸಭಾಸದರು ಚಿಕ್ಕ ಪ್ರಮಾಣದಲ್ಲಿ ವಾರ್ಷಿಕ ವರ್ಗಣಿಯನ್ನು ಸಲ್ಲಿಸುವರು. ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ ಸಮಿತಿಯು ಲಿಲಾವಿನ ವ್ಯವಹಾರದ ಆಡಳಿತೆಯನ್ನು ನೋಡಿಕೊಳ್ಳುವದು. ಲಿಲಾವಿನ ಸ್ಥಳದಲ್ಲಿ ಒಂದು ವಿಶಾಲವಾದ ಜಾಗೆ, ಕಟ್ಟಡ, ನೌಕರ ವರ್ಗ, ಮತ್ತು ಹುಟ್ಟುವಳಿಯನ್ನು ಪರೀಕ್ಷಿಸುವ ಅಥವಾ ತಪಾಸಿಸುವ, ಸಂಗ್ರಹಿಸುವ, ಮತ್ತು ಮಾರುವ ಸನ್ನಾಹ ಈ ಮೊದಲಾದವುಗಳ ವ್ಯವಸ್ಥೆಯಿರುವದು. ಮಾಲನ್ನು ಕೂಡ ಹಾಕಿಡಲು ಉಗ್ರಾಣದ ಸೌಕರ್ಯವೂ ಮತ್ತು ದನ ಮಾರುವ ಅನುಕೂಲತೆಯೂ ಮಾಲನ್ನು ಕೊಳ್ಳುವವರಿಗೆ ಒದಗಿಸಲ್ಪಡುವವು. ಲಿಲಾವಿನ ಸಂಸ್ಥೆಯು ಸಹಕಾರಿ ಪತ್ತಿನ ಬ್ಯಾಂಕಿನಿಂದಲೂ ಅದರಂತೆಯೇ ಕೇಂದ್ರ ಸಾಲ ಪೂರೈಸುವ ಬ್ಯಾಂಕಿನಿಂದಲೂ ಹಣವನ್ನು ಸಾಲವಾಗಿ ಪಡೆಯುವದು. ಲಿಲಾವಿನ ಸಂಸ್ಥೆಯು ತನ್ನ ಕಟ್ಟಡಗಳ ಮತ್ತು ಉಗ್ರಾಣಗಳ ರಚನೆಗಾಗಿ, ವಾಡಿಕೆಯಾಗಿ ಕೇಂದ್ರ ಬ್ಯಾಂಕಿನಿಂದಲೇ ಸಾಲ ಪಡೆಯುವದು. ಹುಟ್ಟುವಳಿಯು ಮಾರಾಟದ ಮೇಲೆ ನೂರಕ್ಕೆ ಕೆಲವೊಂದು ಪ್ರಮಾಣದಲ್ಲಿ ತೆರಿಗೆಯನ್ನೆತ್ತಿ ಆದರಿಂದ ಲಿಲಾವಿನ ಆಡಳಿತೆಯ ವೆಚ್ಚವನ್ನು ನೋಡಿಕೊಳ್ಳುವದು. ಈ ತೆರಿಗೆಯ ಪ್ರಮಾಣವು ಪ್ರತಿ ವರುಷಕ್ಕೆ ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ನಿರ್ಧರಿಸಲ್ಪಡುವದು. ಬಹುತರವಾಗಿ ನೂರಕ್ಕೆ ಮೂರರಷ್ಟಿರುವದು. ಸಭಾಸದರು ತಾವು ಬೆಳೆದ ಹುಟ್ಟುವಳಿಯನ್ನೆಲ್ಲ ಈ ಲಿಲಾವಿನ ಸಂಸ್ಥೆಗಳ ಮುಖಾಂತರವಾಗಿಯೇ ಮಾಡಲು

ಬದ್ಧರಾಗಿರುವರು. ವಾಡಿಕೆಯಾಗಿ ಕೇಂದ್ರ ಸ್ಥಳಗಳಲ್ಲಿ ಲಿಲಾವುಗಳನ್ನು ಜರುಗಿಸಲಾಗುವದು. ತಮಗೆ ಸಮೀಪವಾಗಿರುವ ಲಿಲಾವಿನ ಸಂಸ್ಥೆಗೆ ಹುಟ್ಟುವಳಿಯನ್ನು ಬೆಳೆಯುವವರು ಸಭಾಸದರಾಗುವರು. ತಮಗೆ ಅನುಕೂಲವಾದ ಲಿಲಾವಿನ ಪೇಟೆಯು ಯಾವುದೆಂಬುದನ್ನು ಮೊದಲು ನಿರ್ಧರಿಸಿ ನಂತರ ಅಂಥ ಲಿಲಾವಿನ ಸಂಸ್ಥೆಗೆ ಸಭಾಸದರಾಗುವರು. ಒಮ್ಮೆ ಈ ಪ್ರಕಾರ ನಿರ್ಧರಿಸಿ ಸಭಾಸದರಾದ ನಂತರ, ಮುಂದೆ ಕೊನೆಯವರೆಗೂ ಅವರು ಅದೇ ಸಂಸ್ಥೆಗೆನೇ ತಮ್ಮ ಹುಟ್ಟುವಳಿಯನ್ನು ಅಥವಾ ಮಾಲನ್ನು ಲಿಲಾವಿಗಾಗಿ ಕಳುಹಬೇಕಾಗುವದು. ಅವರು ಮರಣಪಟ್ಟರೆ, ಅಥವಾ ಮೂರು ತಿಂಗಳಿಗಿಂತ ಕಡಿಮೆಯಿಲ್ಲದಷ್ಟು ಅವಧಿಯ ನೋಟೀಸು ಕೊಟ್ಟು ಸಭಾಸದತ್ವವನ್ನು ಹಿಂದಕ್ಕೆ ತೆಗೆದುಕೊಂಡರೆ, ಅಥವಾ ಸಂಸ್ಥೆಯವರು ಅವರನ್ನು ತಳ್ಳಿದರೆ ಅವರ ಸಭಾಸದತ್ವವು ನಿಂತು ಹೋಗುವದು. ಕೆಲವೊಂದು ಹಳ್ಳಿಗಳಲ್ಲಿ ಆರ್ಥಿಕ ಪರಿಸ್ಥಿತಿಯು ಅನುಕೂಲತೆಯಿದ್ದರೆ, ಒಂದೊಂದು ವಸ್ತುವಿನ ಮಾರಾಟಕ್ಕಾಗಿಯೇ ಬೇರೆ ಬೇರೆ ಲಿಲಾವಿನ ಸಂಸ್ಥೆಗಳೂ ಇರುವದುಂಟು. ಅಂದರೆ ಹಣ್ಣು-ಹಂಪಲಗಳ ಲಿಲಾವಿಗಾಗಿ ಒಂದು ಪ್ರತ್ಯೇಕ ಸಂಸ್ಥೆ, ಕಾಯಿಪಲ್ಲೆಗಳ ಮಾರಾಟಕ್ಕಾಗಿ ಪ್ರತ್ಯೇಕವಾದ ಸಂಸ್ಥೆ, ಹೂಗಳ ಲಿಲಾವಿಗಾಗಿಯೇ ಬೇರೆಯೊಂದು ಸಂಸ್ಥೆ ಹೀಗೂ ಇರುವದುಂಟು. ಆಯಾ ವಸ್ತುಗಳನ್ನು ಬೆಳೆಯುವವರು ಅವುಗಳ ಲಿಲಾವಿನ ಸಂಸ್ಥೆಗಳಿಗೆ ಸಭಾಸದರಾಗುವರು.

ಒಕ್ಕಲಿಗನು ಬೆಳಗಿನಲ್ಲಿ ಲಿಲಾವು ಆರಂಭವಾಗುವ ಕೆಲವೊಂದು ಅವಧಿಯ ಮೊದಲು, ತನ್ನ ಹುಟ್ಟುವಳಿಯನ್ನು ಸಂಸ್ಥೆಗೆ ತರುವನು. ಅದನ್ನು ವಿಂಗಡಿಸಿ, ತೂಗಿ, ವರ್ಗೀಕರಿಸಲಾಗುವದು. ಲಿಲಾವಿನ ಅಧಿಕಾರಿಗಳು ಮಾಲನ್ನು ತಪಾಸಿಸಿ, ಅದರ ಒಂದು ಪಟ್ಟಿಯನ್ನು ತಯಾರಿಸುವರು. ಸರಕಾರೀ ಪರೀಕ್ಷಕರೂ ಆ ಹುಟ್ಟುವಳಿಯನ್ನು ಪರೀಕ್ಷಿಸುವರು. ಹೀಗೆ ಪರೀಕ್ಷಿಸಿ ಮಾಲಿನ ಶ್ರೇಷ್ಠತೆಯ ಮೇರೆಗೆ ತರಗತಿಗಳನ್ನು ಮಾಡಿ, ಎಲ್ಲ ಮಾಲನ್ನು ಅಥವಾ ಮಾಲಿನ ನಮೂನೆಗಳನ್ನು ( ಸ್ಯಾಂಪಲ್ಲು ) ಲಿಲಾವಿನ ಚಾವಡಿಗೆ ಅಥವಾ ಸ್ಥಳಕ್ಕೆ ತರುವರು. ಅಲ್ಲಿ ಒಂದು ಎತ್ತರವಾದ ಮೇಲಟ್ಟ ( ಗ್ಯಾಲರಿ ) ಯಿರುವದು. ಉಪನ್ಯಾಸ ಗೃಹದಲ್ಲಿ ರಂಗ-

ಭೂಮಿಯಲ್ಲಿ ಅಥವಾ ದರ್ಶನ ಶಾಲೆಯಲ್ಲಿ, ಸುತ್ತುವರಿದು ಮೆಟ್ಟಿ ಮೆಟ್ಟಿ-ಲಾಗಿ ಮೇಲೇರಿದ ಕಟ್ಟೆಯಲ್ಲಿ, ಆ ಕಟ್ಟೆಯ ಮೆಟ್ಟು ಮೆಟ್ಟಿಲುಗಳಲ್ಲಿ, ಕುಳಿತುಕೊಂಡವರಿಗೆ ಅಲ್ಲಿಯ ವ್ಯವಹಾರದ ಸರ್ವದರ್ಶನವಾಗುವಂತೆ, ಸಮಗ್ರದರ್ಶನವಾಗುವಂತೆ, ಈ ಲಿಲಾವಿನ ಗ್ಯಾಲರಿಯಲ್ಲಿ ಕೊಳ್ಳುವವರ ಆಸನಗಳನ್ನೇರ್ಪಡಿಸಿರುವರು. ಅಲ್ಲಿ ಕುಳಿತುಕೊಂಡು, ಲಿಲಾವಿನ ಎಲ್ಲ ವ್ಯವಹಾರವನ್ನು ಅವರು ಸುಲಭವಾಗಿ ನೋಡಬಲ್ಲರು. ಕೊಳ್ಳುವವರು ಕೂಡ್ರುವ ಪ್ರತಿಯೊಂದು ಆಸನಕ್ಕೂ ಒಂದೊಂದು ಅಂಕೆ (ನಂಬರ) ಗಳಿದ್ದು ಒಂದೊಂದು ಒತ್ತುಗುಂಡಿಯೂ (Press Button) ಇರು-ವದು. ಇದನ್ನೊತ್ತಿ ಕೊಳ್ಳುವವರು ಲಿಲಾವು ಮಾಡುವ ಯಂತ್ರದ ಜೊತೆಗೆ ನಿಕಟ ಸಂಬಂಧವನ್ನಿಟ್ಟುಕೊಂಡು, ಬೇಕಾದುದನ್ನು ವಿಚಾರಿಸಲಿಕ್ಕೆ ಅನು-ಕೂಲವಾಗುವದು. 'ಗ್ಯಾಲರಿ'ಯ ಎದುರಿಗೆ ಒಂದು ಎತ್ತರಿಸಲ್ಪಟ್ಟ ಸಪಾಟಾದ ಕಟ್ಟೆ (Platform) ಯಿದ್ದು ಅಲ್ಲಿ ಒಂದು ವಿದ್ಯುತ್ತಿನ ಗಡಿಯಾರವಿರುವದು. ವಿದ್ಯುತ್ತಿನ ಲಿಲಾವು ಮಾಡುವ ಯಂತ್ರವು ತನ್ನ-ಷ್ಟಕ್ಕೆ ತಾನೇ ಲಿಲಾವುಗಾರನು ಮಾಡತಕ್ಕ ಕಾರ್ಯವನ್ನು ನಿರ್ವಹಿಸು-ವದು. ವಿದ್ಯುತ್ತಿನ ಗಡಿಯಾರವಿರುವ ಆ ಎತ್ತರವಾದ ಕಟ್ಟೆಯ ಮೇಲೆ, ಲಿಲಾವಿನ ಸಮಯಕ್ಕೆ ಲಿಲಾವಿನ ಒಡೆಯನೂ, ಒಬ್ಬ ಕಾರಕೂನ (ಲೆಕ್ಕಿಗ) ನೂ ಕೂಡ್ರುವರು. ಗ್ಯಾಲರಿ ಮತ್ತು ಎತ್ತರವಾದ ಆ ಕಟ್ಟೆಯ ನಡುವೆ ಒಂದು ದೊಡ್ಡ ಪಟಾಂಗಣವಿರುವದು. ಒಂದು ಒತ್ತುವ ಗಾಡಿಯು ಅಥವಾ ನಾವೆಯು ಕಾಯಿಪಲ್ಲೆ ಹಣ್ಣು ಹಂಪಲ ಹೂ ಮೊದಲಾದವುಗಳನ್ನು ಆ ಕಟ್ಟೆಯ ಎದುರಿಗೆ ತರುವದು. ಲಿಲಾವಿನ ಒಡೆಯನು ಮಾರಾಟಾಗತಕ್ಕ ಆ ಹುಟ್ಟುವಳಿಯನ್ನು ಬೆಳೆದವನ ಹೆಸರು, ಅದರ ಗುಣ, ಪ್ರಮಾಣ ಈ ಮೊದಲಾದವುಗಳನ್ನು ವಿವರಿಸುವನು. ಅವನ ಸಹಾಯಕನು ಅದರ ನಮೂನೆಯನ್ನು ಎತ್ತಿ ಹಿಡಿದು, ಕೊಳ್ಳುವ ಗಿರಾಕಿಗಳಿಗೆ ತೋರಿಸಿ ಅದರಲ್ಲೇನಾದರೂ ಕುಂದು ಕೊರತೆಗಳಿವೆಯೋ ಹೇಗೆ ಎಂಬುದನ್ನು ವಿಚಾರಿಸುವನು. ಲಿಲಾವಿನ ಯಂತ್ರದ ಅಂದರೆ ಆ ವಿದ್ಯುತ್ತಿನ ಗಡಿಯಾ-ರದ ಕೈಯು, ಅದರ ವಿರೋಧ ಗತಿಯಲ್ಲಿ ಚಲಿಸಹತ್ತುವದು. ಆ ಗಡಿಯಾ-ರದ ಮುಖ ಪಟದ ದಂಡೆಗುಂಟ ೧ ರಿಂದ ೧೦೦ ಅಂಕೆಗಳಿರುವವು. ಕೊಳ್ಳುವವನು ಕೊಳ್ಳಬೇಕೆಂದಿರುವ ದರದ ಅಂಕೆಗೆ ಗಡಿಯಾರದ ಕೈಯು

ಬಂದೊಡನೆಯೇ, ತನ್ನ ಸ್ಥಳದಲ್ಲಿಯ ಅಂದರೆ ಆಸನದಲ್ಲಿಯೆ ಒತ್ತು ಗುಂಡಿಯನ್ನೊತ್ತುವನು. ಅಲ್ಲಿಗೆ ಲಿಲಾವು ಮುಗಿದಂತಾಯಿತು. ಗಡಿಯಾರದ ಮುಖದ ಮೇಲೆ, ಗುಂಡಿಯನ್ನೊತ್ತಿದವನ ಆಸನದ ನಂಬರು ತೋರಿಯತೊಡಗುವದರಿಂದ, ಲಿಲಾವಿನಲ್ಲಿ ಕೇಳಿದವನು ಯಾವನೆಂಬುದು ಕೂಡಲೇ ಗೊತ್ತಾಗುವದು. ಎತ್ತರಿಸಲ್ಪಟ್ಟ ಕಟ್ಟೆಯ ಮೇಲೆ, ಲಿಲಾವಿನ ಒಡೆಯನ ಜೊತೆಗೆ ವಿದ್ಯುದ್ಘಡಿಯಾರದ ಬಳಿ ಕುಳಿತು ಕಾರಕೂನನು ಲಿಲಾವಿನ ಪುಸ್ತಕಗಳಲ್ಲಿ ವ್ಯವಹಾರದ ವಿವರಗಳನ್ನು ಬರೆಯುವನು. ಮಾರಾಟದ ವ್ಯವಹಾರವು ಮುಗಿದೊಡನೆ ಪುಸ್ತಕಗಳನ್ನು ಹಣ ಕೊಡುವ ಕಚೇರಿಗೆ ಕಳಿಸುವರು. ಮಾಲು ಕೊಂಡವರು, ಹಣವನ್ನು ಕೂಡಲೇ ಕೊಡುವರು. ಅಥವಾ ಕಚೇರಿಯ ಸಮ್ಮತಿ ಪಡೆದು ಹಣ ಕೊಡಲಿಕ್ಕೆ ಒಂದು ವಾರದ ಅವಧಿಯನ್ನು ಪಡೆಯುವರು. ಲಿಲಾವು ಮಾಡಿದವರೇ ಹುಟ್ಟುವಳಿಯನ್ನು ಬೆಳೆದವರಿಗೆ ಅದರ ಬೆಲೆಯನ್ನು ಕೊಡಲಿಕ್ಕೆ ಹೊಣೆಗಾರರಾಗಿರುವರು. ವಾಡಿಕೆಯಾಗಿ ಲಿಲಾವು ಮುಗಿದೊಡನೆಯೇ ಅದರಿಂದ ಬರುವ ಬೆಲೆ ಅಂದರೆ ಹಣವನ್ನು ಬೆಳೆದವರಿಗೆ ಕೊಟ್ಟು ಬಿಡುವದರಿಂದ, ಕೊಡತಕ್ಕ ಬಾಕಿಗಳೇನೂ ಉಳಿಯುವದಿಲ್ಲ. ಈ ಮೇರೆಗೆ ಒಕ್ಕಲಿಗರ ಹುಟ್ಟುವಳಿಯನ್ನು ಪರೀಕ್ಷಿಸಿ, ಪರಿಶೀಲಿಸಿ, ಲಿಲಾವಮಾಡಿ, ಕೊಳ್ಳುವದರಿಂದ ಹಣವನ್ನು ವಸೂಲ ಮಾಡಿ, ತನ್ನ ಯೋಗ್ಯ ಕಮೀಶನನ್ನು ಅಂದರೆ ದಲಾಲಿಯನ್ನು ಮುರಿದುಕೊಂಡು ಬೆಳೆಯುವವರಿಗೆ ಕೊಡುವ ವ್ಯವಸ್ಥೆಯನ್ನು ಮಾಡುವ ಲಿಲಾವಿನ ವ್ಯವಹಾರದ ಕ್ರಮವಿರುತ್ತದೆ. ಮೇಲೆ ವಿವರಿಸಿದ ಹಾಗೆ, ಇದು ಕೊಳ್ಳುವವರಿಗೆ ಎಲ್ಲ ಬಗೆಯ ಸೌಕರ್ಯಗಳನ್ನು ಒದಗಿಸಿ ಕೊಡುತ್ತದೆ. ಅಂತೆಯೇ ಮಾಲನ್ನು ಮಾರುವವರಿಗೂ ಶಕ್ಯವಿದ್ದಷ್ಟು ಹೆಚ್ಚಿನ ಬೆಲೆಯ ಭರವಸೆಯನ್ನು ಕೊಡುತ್ತದೆ. ಪ್ರತಿಯೊಂದು ಲಿಲಾವಿನ ವ್ಯವಹಾರವು, ಗೋಣಗಾಟ, ಚಿಣಕಾಟ, ತಕರಾರುಗಳಿಲ್ಲದೆ, ಒಂದೆರಡು ನಿಮಿಷಗಳಲ್ಲಿ ಮುಗಿದು ಹೋಗುವದು. ಬೇಡಿಕೆಯ ಪ್ರಕಾರ ಮಾಲಿನ ಪೂರೈಕೆಯನ್ನು ನಿಯಮನಗೊಳಿಸಿ, ಸರಿಪಡಿಸುವ ಪ್ರಸಂಗಗಳಲ್ಲಿ ಕೊಳ್ಳುವ ಗಿರಾಕಿಗಳಲ್ಲಿ ತೀವ್ರವಾದ ಸ್ಪರ್ಧೆಯಿರುವದು. ಕೊಳ್ಳುವವರು ಕೊಡುವ ಬೆಲೆಯು, ನಿರ್ಧರಿಸಲ್ಪಟ್ಟ ತೀರ ಕಡಿಮೆ ಬೆಲೆಗಿಂತ ಕಡಿಮೆಯಿರುವಾಗ, ಹುಟ್ಟುವಳಿಯನ್ನು ಮಾರಲಾಗುವದಿಲ್ಲ

ಹೀಗೆ ಬೆಳೆಯುವವರ ಹಿತದ ದೃಷ್ಟಿಯಿಂದ, ಲಾಭದ ದೃಷ್ಟಿಯಿಂದ ಬೆಳೆಯು ಬರುವವರೆಗೂ ಮಾರಾಟಕ್ಕೆ ತಡೆ ಹಾಕಲಾಗುವದರಿಂದ, ಅವರನ್ನು ಕೊಳ್ಳುವವರು ಸುಲಿದುಕೊಳ್ಳಲು ಆಸ್ಪದವೇ ಉಳಿಯುವದಿಲ್ಲ. ರೇಲ್ವೆ ಸ್ಟೇಶನ್ನಿನ ಬಳಿಯಲ್ಲಿ ಕಾಲುವೆಗಳು ಹರಿಯುತ್ತಿರುವ ಪ್ರವೇಶದ ಸಮೀಪದಲ್ಲಿ ಲಿಲಾವಿನ ಪೇಟೆಗಳನ್ನು ಅಥವಾ ಮಳಿಗೆಗಳನ್ನು ಕಟ್ಟಲಾಗುವದು. ಇದರಿಂದ ಇವಕ್ಕೂ ರೇಲ್ವೆ ಮತ್ತು ಕಾಲುವೆಯ ಮಾರ್ಗಗಳಿಗೆ ನಿಕಟವಾದ, ಸುಸಂಬದ್ಧ ಸಂಬಂಧವಿರುವದು. ರೇಲ್ವೆಯ ಮಾರ್ಗಗಳು ತಮ್ಮ ಕ್ಷೇತ್ರದಲ್ಲಿ ಹಾಯ್ದು ಹೋಗುವ ಹಾಗೆ ಎಷ್ಟೋ ಲಿಲಾವಿನ ಪೇಟೆಗಳು ನಿರ್ಮಾಣವಾಗಿವೆ. ಇದರಿಂದ ಮಾಲಿನ ಸಾರಿಗೆಯು ಸುಲಭವೂ ಶೀಘ್ರವೂ ಆಗುವದು. ವಾಡಿಕೆಯಾಗಿ ಹಾಲಂಡಿನಲ್ಲಿಯ ಬಾಗಾಯತ ಅಥವಾ ತೋಟದ ಎಲ್ಲ ಹುಟ್ಟುವಳಿಯೂ ಸ್ವದೇಶ ಪರದೇಶಗಳಲ್ಲಿ ಕೂಡಿಯೇ ಕೀರ್ತಿವೆತ್ತ ಸಹಕಾರಿ ಲಿಲಾವಿನ ಸಂಸ್ಥೆ ಅಥವಾ ಪೇಟೆಗಳ ಮುಖಾಂತರವೇ ಮಾರಾಟವಾಗುವದು. ಇಲ್ಲಿ ೬೦,೦೦೦ ಸದಸ್ಯರನ್ನೊಳಗೊಂಡ ೧೬೭ ಸಹಕಾರಿ ಲಿಲಾವಿನ ಸಂಸ್ಥೆಗಳಿವೆ. ತೋಟಿಗರ ಸಂಖ್ಯೆಗಿಂತಲೂ ಸಭಾಸದರ ಸಂಖ್ಯೆ ಹೆಚ್ಚಿಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ ಕೆಲ ಕೆಲ ತೋಟಿಗರು ಒಂದಕ್ಕಿಂತ ಹೆಚ್ಚು ಸಂಸ್ಥೆಗಳ ಸಭಾಸದರಾಗಿರುವರು. ೧೯೫೦ ರಲ್ಲಿ ಸುಮಾರು ೩೦೦,೦೦೦೦೦೦ ರೂಪಾಯಿ ( ಅಂದರೆ ೩೦೦೦೦೦೦೦ ಪೌಂಡುಗಳ) ಲಿಲಾವಿನ ಒಟ್ಟು ವ್ಯವಹಾರವಾಗಿದೆ. ೧೯೧೩ ರಲ್ಲಿ ಸ್ಥಾಪಿತವಾದ ತೋಟಿಗರ ಲಿಲಾವಿನ ಸೆಂಟ್ರಲ್ ಬ್ಯೂರೋ ಅಂದರೆ ಕೇಂದ್ರ ಲಿಲಾವಿನ ಕಚೇರಿಗೆ ಎಲ್ಲ ಲಿಲಾವಿನ ಸಂಸ್ಥೆಗಳು ಸಮಾವೇಶವಾಗಿವೆ. ಈ ಸಂಸ್ಥೆಯು ಬಿನ್ ವ್ಯಾಪಾರೀ ಘಟಕವಾಗಿದೆ. ಇದು ತನಗೆ ಸಮಾವೇಶವಾದ ಲಿಲಾವಿನ ಸಂಸ್ಥೆಗಳ ಮುಖಾಂತರ ಸಹಕಾರ ತತ್ವದ ಮೇಲೆ ಹಣ್ಣು ಹಂಪಲ, ಹೂವು, ಕಾಯಿಪಲ್ಲೆ ಈ ಮೊದಲಾದವುಗಳನ್ನು ಮಾರುವ ಮತ್ತು ಹಂಚುವ ವ್ಯವಹಾರಕ್ಕೆ ಪ್ರೋತ್ಸಾಹನ ಕೊಡುತ್ತದೆ. ಅಲ್ಲದೆ, ಒಕ್ಕಲುತನ, ಆಹಾರ ಮೀನಿನ ವ್ಯವಸಾಯಗಳ ಮಿನಿಸ್ಟ್ರಿಯೊಡನೆ ಅಂದರೆ ಮಂತ್ರಿಮಂಡಲದೊಡನೆ ಈ ಸಂಸ್ಥೆಯು ನಿಕಟಸಂಬಂಧವನ್ನಿಟ್ಟುಕೊಂಡು, ತೋಟದ ಹುಟ್ಟುವಳಿಯ ದರವನ್ನು ಗೊತ್ತುಪಡಿಸಿ ಅದನ್ನು ಮಾರುವಲ್ಲಿ ಆಸಕ್ತಿ ವಹಿಸುತ್ತದೆ. ಸರ್ವಸಾಧಾರಣ ಸಭೆ

ಯಲ್ಲಿ ಆರಿಸಲ್ಪಟ್ಟ ಸಮಿತಿಯು ಎಲ್ಲ ಸಂಸ್ಥೆಗಳ ಆಡಳಿತೆಯನ್ನು ನಿರ್ವಹಿಸಿಕೊಂಡು ಹೋಗುತ್ತದೆ. ಈ ಸೆಂಟ್ರಲ್ ಬ್ಯೂರೋ ಅಂದರೆ ಕೇಂದ್ರ ಲಿಲಾವಿನ ಕಚೇರಿಗೆ ಕಾಯದೆಯಿಂದ ಕೆಲವೊಂದು ವಿಶಿಷ್ಟ ಅಧಿಕಾರಗಳು ದೊರೆತಿದ್ದು ಇವರ ಸಲಹೆ ಸೂಚನೆಗಳನ್ನನುಸರಿಸಿಯೇ ಪ್ರತಿಯೊಂದು ಲಿಲಾವಿನ ವ್ಯವಹಾರವು ಜರಗುವದು. ಇದು ಸಹಕಾರಿ ಲಿಲಾವಿನ ಸಂಸ್ಥೆಗಳ ಜೊತೆಗೆ ಸಂಬಂಧವನ್ನಿಟ್ಟುಕೊಂಡು, ಅವು ಒಂದು ಇಡಿಯ ಘಟಕದ ಬಿಡಿ ಬಿಡಿ ಅಂಗಗಳಂತೆ ವರ್ತಿಸುವ ಹಾಗೆ ನೋಡಿಕೊಳ್ಳುತ್ತದೆ. ಇದರ ಕಾರ್ಯಕಲಾಪಗಳು ಮುಖ್ಯವಾಗಿ ಕೆಳಗಿನಂತಿವೆ.

(೧) ಪರದೇಶಕ್ಕೆ ಕಳುಹಲ್ಪಡಬೇಕಾದ ಎಲ್ಲ ಹುಟ್ಟುವಳಿಯನ್ನು ಬ್ಯೂರೋವಿನ ಇನ್ಸಪೆಕ್ಟರರು ತಪಾಸಿಸುವದು. ತೀಕ್ಷ್ಣ ಮೇಲ್ವಿಚಾರಣೆಯ ಮೂಲಕ, ಹುಟ್ಟುವಳಿಯ ತರಗತಿ, ತಾರತಮ್ಯಗಳನ್ನು ನಿರ್ದಿಷ್ಟಪಡಿಸಿ ಅದರಂತೆ ಮಾಲಿನ ಗಂಟುಗಳನ್ನು ಕಟ್ಟುವದು. (ಟಿಪ್ಪಣಿ:— ಆಯಾ ಲಿಲಾವಿನ ಸಂಸ್ಥೆಗಳಲ್ಲಿಯೂ ಅವುಗಳಿಗೆ ಸಂಬಂಧಿಸಿದ ಈ ಬಗೆಯ ಇನ್ಸಪೆಕ್ಟರರಿರುವರು.)

(೨) 'ಟೆಲಿಫೋನ್' ಮತ್ತು 'ಟೆಲಿಪ್ರಿಂಟರು' ಗಳ ಸಹಾಯದಿಂದ ತನ್ನ ಬುದ್ಧಿ ಕೌಶಲ್ಯವನ್ನುಪಯೋಗಿಸಿ, ಪೇಟೆಯ ವ್ಯವಹಾರದ ಪರಿಚಯವನ್ನು ಕೂಡಲೇ ಮಾಡಿ ಕೊಡುತ್ತದೆ. ವಿವಿಧ ನಿಬಂಧನೆ ಮಾಹಿತಿಯನ್ನು ಪರಿಚಯವನ್ನು ಲಿಲಾವಿನ ಸಂಸ್ಥೆಗಳ ವ್ಯವಸ್ಥಾಪಕರಿಗೆ ಮಾಡಿ ಕೊಡುವದು. ದರಗಳು ತೀರ ಕೆಳಮಟ್ಟಕ್ಕಿಳಿದಿವೆಯೆಂದು ವ್ಯವಸ್ಥಾಪಕರಿಗೆ ಸಂಶಯ ಬಂದಾಗ, ಸೆಂಟ್ರಲ್ ಬ್ಯೂರೋವಿನಿಂದ ಸಲಹೆ ಪಡೆಯುವರು.

(೩) ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ ಅಂದರೆ ಒಕ್ಕಲುತನದ ಮಂತ್ರಿ ಮಂಡಲದೊಡನೆ ಸಂಬಂಧವನ್ನಿಟ್ಟುಕೊಂಡು ಸೆಂಟ್ರಲ್ ಬ್ಯೂರೋ ಅಂದರೆ ಕೇಂದ್ರ ಕಚೇರಿಯು ಮಾಲನ್ನು ಕಳಿಸುವ ಬಗೆಗೆ ಆಗತ್ಯವಿರುವ ಮೇಲ್ ವ್ಯವಸ್ಥೆಯ ಬಗೆಗೆ ಮೇಲ್ವಿಚಾರಣೆಯ ಬಗೆಗೆ ಪರದೇಶಗಳೊಡನೆ ಪತ್ರ ವ್ಯವಹಾರ ಮಾಡುತ್ತದೆ. (ಮಾಲನ್ನು ಪರದೇಶಕ್ಕೆ ಒಯ್ಯುವ ವ್ಯಾಪಾರಸ್ಥರ ಮೇಲೆಯೇ ಹಾದಿಯಲ್ಲುಂಟಾಗುವ ಹಾನಿಯ ಅಥವಾ ಅಪಘಾತದ ಹೊಣೆ ಇರುವದು ಲಿಲಾವಿನ ಸಂಸ್ಥೆಗಳ ಸದಸ್ಯರು ತಮ್ಮ ಬಳಿಯಲ್ಲಿ

ಸಂಗ್ರಹಿಸಿದ್ದ ಮಾಲಿನ ಮಾಹಿತಿಯನ್ನು ಕೇಂದ್ರ ಕಚೇರಿಗೆ ಪೂರೈಸುವದು. ಅದರಿಂದ ಕೇಂದ್ರ ಕಚೇರಿಯು ಪರದೇಶಗಳಿಗೆ ಮಾಲಿನ ಅಗತ್ಯವಿದ್ದಾಗ ಇಂಥ ಸವಸ್ಯರನ್ನು ಕರೆಯಿಸಿ, ಅದರ ವ್ಯವಸ್ಥೆ ಮಾಡುವದು.

(೪) ಸೆಂಟ್ರಲ್ ಬ್ಯೂರೋದ ಪರವಾಗಿ ಒಬ್ಬ ಸಭಾಸದನು, ಸರಕಾರದ ಪರವಾಗಿ ಒಬ್ಬ ಸಭಾಸದನು, ಮಾಲನ್ನು ಪರದೇಶಕ್ಕೆ ಕಳಿಸುವವರ ಪರವಾಗಿ ಒಬ್ಬ ಸಭಾಸದನು ಹೀಗೆ ಮೂವರನ್ನೊಳಗೊಂಡ ಒಂದು ಸಮಿತಿಯು ಪರದೇಶಕ್ಕೆ ಕಳಿಸಲ್ಪಡುವ ಮಾಲಿನ ಕೀರ ಕಡಿಮೆಯ ದರಗಳನ್ನು ಗೊತ್ತುಪಡಿಸುವದು.

(೫) ೧೯೪೮ ರಿಂದ, ಕಾಯಿಪಲ್ಲೆಗಳಿಗಾಗಿ ಕೀರ ಕಡಿಮೆಯ ಬೆಲೆಯನ್ನು ಬಾಯಿಗೂಡಿಸುವ ಅಥವಾ ಸರಿಪಡಿಸುವ ನಿಧಿಯ ಏರ್ಪಾಟನ್ನು ಈ ಸೆಂಟ್ರಲ್ ಬ್ಯೂರೋ ಮಾಡಿದೆ. ಎಲ್ಲ ಲಿಲಾವಿನ ಸಂಸ್ಥೆಗಳು ತಾವು ಮಾರುವ ಕೆಲವೊಂದು ಕಾಯಿಪಲ್ಲೆಗಳ ಬೆಲೆಯೊಳಗಿಂದ ಕೆಲವೊಂದು ಹಣವನ್ನು ಕಡಿಮೆ ( ವಜಾ ) ಮಾಡಿ ಸೆಂಟ್ರಲ್ ಬ್ಯೂರೋದ ಕಡೆಗೆ ಕಳುಹುವವು. ಈ ಬ್ಯೂರೋ ಸಂಬಂಧಿಸಿದ ಕಾಯಿಪಲ್ಲೆಯ ನಿಧಿಗೆ ಆ ಹಣವನ್ನು ಜಮೆ ಮಾಡಿ, ಪೇಟೆಯಲ್ಲಿ ಮಾಲಿನ ವಿಪುಲತೆಯಿದ್ದಾಗ, ಅಥವಾ ದರಗಳು ಕೀರ ಕೆಳಮಟ್ಟಕ್ಕೆ ಇಳಿದಾಗ, ಕಾಯಿಪಲ್ಲೆಯನ್ನು ಬೆಳೆಯುವವರಿಗೆ ಈ ನಿಧಿಯೊಳಗಿಂದ ಕೊರತೆಯ ಹಣವನ್ನು ಭರತಿ ಮಾಡಿ ಕೊಡುವದು.

(೬) ಈ ಬ್ಯೂರೋ ಲಿಲಾವಿನ ಸಂಸ್ಥೆಗಳ ವ್ಯಾಪಾರದ ಚಟುವಟಿಕೆಗಳನ್ನು ಕುರಿತು ಸಾಮಾನ್ಯವಾಗಿ ಸಲಹೆ ಕೊಡುವ ವ್ಯವಸ್ಥೆ ಮಾಡುವದು. ಅಲ್ಲದೆ, ಹಣ್ಣು ಹಂಪಲ ಕಾಯಿಪಲ್ಲೆಗಳಿಗೆ ಸಂಬಂಧಿಸಿದ ವ್ಯವಹಾರದ ವಿಷಯದಲ್ಲಿ ಪರದೇಶಗಳೊಡನೆ ವಿಚಾರ ವಿನಿಮಯ ಮಾಡಿ, ಪರಸ್ಪರರಲ್ಲಿ ಹೊಂದಿಕೆಯಾಗುವ ಕರಾರುಗಳನ್ನು ಮಾಡುವದು. ಮತ್ತು ರಾಜಮಾರ್ಗ ಉಗಿಬಂಡಿ ಹಡಗು, ವಿಮಾನ, ಈ ಮೊದಲಾದ ಸಾಗಿಗೆಯ ವಿಷಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸಿ ಅವುಗಳ ಸುಧಾರಣೆಯ ಬಗೆಗೆ, ಸಾಗಿಗೆಯ ಹಾಸಲನ್ನು ( ದರವನ್ನು ) ಕಡಿಮೆ ಮಾಡುವ ಬಗೆಗೆ, ಮತ್ತು ಸ್ವಪರದೇಶಗಳಲ್ಲಿ ಹಣ್ಣು ಕಾಯಿಪಲ್ಲೆಗಳು ಹೆಚ್ಚಾಗಿ

ಮಾರಾಟವಾಗುವಂತೆ, ಬಳಸಲ್ಪಡುವಂತೆ ಪ್ರಕಟಣೆ (ಜಾಹೀರಾತು) ಗಳನ್ನು ಹೊರಡಿಸುವ ಬಗೆಗೆ ಯತ್ನಿಸುತ್ತದೆ.

ಈ ಎಲ್ಲ ಕಾರ್ಯಕಲಾಪಗಳನ್ನು ಸರಿಯಾಗಿ ನಿರ್ವಹಿಸಿಕೊಂಡು ಹೋಗಲು, ಸೆಂಟ್ರಲ್ ಬ್ಯೂರೋ ಅಂದರೆ ಕೇಂದ್ರ ಲಿಲಾವಿನ ಕಚೇರಿಯು ಕೆಳಗಿನ ಖಾತೆಗಳನ್ನು ನಿರ್ಮಿಸಿಕೊಂಡಿದೆ.

(೧) ಸರ್ವಸಾಧಾರಣ ಆಡಳಿತೆಯ ಖಾತೆ.
(೨) ವ್ಯವಹಾರ ಶಾಸ್ತ್ರಜ್ಞರ ಖಾತೆ.
(೩) ಲೆಕ್ಕ ಪರಿಶೋಧನೆಯ ಖಾತೆ.
(೪) ಆರ್ಥಿಕ ವಿಷಯಕ್ಕೆ ಸಂಬಂಧಿಸಿದ ಖಾತೆ.
(೫) ಪ್ರಸಿದ್ಧಿಯ ಅಥವಾ ಪ್ರಕಟಣೆಯ ಖಾತೆ.

ಈ ಕೇಂದ್ರ ಲಿಲಾವಿನ ಕಚೇರಿ (ಬ್ಯೂರೋ) ಗೆ ಕೆಳಗಿನಂತೆ ಹಣದ ಸಹಾಯ ದೊರೆಯುವದು.

ಅ:—ಸಮಾವೇಶವಾದ ಲಿಲಾವಿನ ಸಂಸ್ಥೆಗಳಲ್ಲಿ ವರ್ಷದಲ್ಲಿ ಘಟಿಸುವ ಒಟ್ಟು ವ್ಯವಹಾರದ ಬೆಲೆಯಲ್ಲಿ ನೂರಕ್ಕೆ ೧⅛ ದಷ್ಟು ತೆರಿಗೆಯ ರೂಪದಿಂದ

ಬ:—ವ್ಯಾಪಾರದ ಅಭಿವೃದ್ಧಿಗಾಗಿ ಪ್ರಸಿದ್ಧಿ ಪ್ರಕಟನೆಗಾಗಿ ತಗಲುವ ವೆಚ್ಚವನ್ನು ಬಾಯಿಗೂಡಿಸಲು ಸಮಾವೇಶವಾದ ಲಿಲಾವಿನ ಸಂಸ್ಥೆಗಳಲ್ಲಿ ಇಡೀ ವರುಷದಲ್ಲಿ ಆಗುವ ಒಟ್ಟು ವ್ಯವಹಾರದ ಬೆಲೆಯಲ್ಲಿ ನೂರಕ್ಕೆ ಒಂದರಷ್ಟು ತೆರಿಗೆಯ ರೂಪದಿಂದ

ಕ:—ಮಾರಾಟವಾಗದೇ ಉಳಿದ ಹುಟ್ಟುವಳಿಗೆ ಅಥವಾ ಮಾಲಿಗೆ ಪ್ರತಿಫಲದ ಬೆಲೆಯನ್ನು ಕೊಡುವ ದೃಷ್ಟಿಯಿಂದ ಕೆಲವೊಂದು ಹುಟುವಳಿಗಳ ಮಾರಾಟದ ಬೆಲೆಯ ಮೇಲೆ ತೆರಿಗೆಯ ರೂಪದಿಂದ

ಡ:—ಲಿಲಾವಿನ ಸಂಸ್ಥೆಗಳಿಗೆ ಲೆಕ್ಕಪರಿಶೋಧನೆಯ ರೂಪದ ಸಲ್ಲಿಸುವ ಸೇವೆಗೆ ತಗಲುವ ಪ್ರತ್ಯಕ್ಷ ವೆಚ್ಚವನ್ನು ಕೊಡುವ ದೃಷ್ಟಿಯಿಂದ ಸಂದ ಹಣದಿಂದ

ಈ:—" ಲಿಲಾವಿನ ಕೇಂದ್ರ ಕಚೇರಿಯಿಂದ ಪ್ರಕಟವಾಗುವ " ಘೋಯೆಂಥೆನ್ " ( Ghoenten ) ಅಂದರೆ " ಕಾಯಿಪಲ್ಯೆ ಮತ್ತು ಹಣ್ಣು ಹಂಪಲ " ಎಂಬ ವಾರಪತ್ರಿಕೆಗೆ ಲಭಿಸುವ ವರ್ಗಣಿಯಿಂದ

# ಕ್ಷೀರ ಕಡಿಮೆ ಬೆಲೆಯ ಯೋಜನೆ

೧೯೫೪ರಿಂದ ಕ್ಷೀರ ಕಡಿಮೆ ಬೆಲೆಯ ಯೋಜನೆಯು ಪ್ರಚಾರದಲ್ಲಿರುವದು. ಆರಂಭದಲ್ಲಿ ಈ ಯೋಜನೆಯನ್ನು ಕೆಲ ಹುಟ್ಟುವಳಿಗಳಿಗೆ ಅನ್ವಯಿಸಲಾಯಿತು. ಸದ್ಯಕ್ಕೆ ಈ ಯೋಜನೆಯು ಮೂವತ್ತಮೂರು (೩೩) ಅತಿ ಮಹತ್ವದ ಹುಟ್ಟುವಳಿಗಳಿಗೆ ಅನ್ವಯಿಸಲ್ಪಟ್ಟಿದೆ. ಈ ಯೋಜನೆಯ ಮುಖ್ಯ ರೂಪರೇಷೆಗಳು ಕೆಳಗಿನಂತಿವೆ.

ಸುಗ್ಗಿಯು ಅಥವಾ ಹಂಗಾಮು ಆರಂಭವಾಗುವ ಕೆಲ ವಾರಗಳ ಮೊದಲು ಯ್ಯುರೋಪ ಪರವಾಗಿ ಕ್ಷೀರ ಕಡಿಮೆಯ ಬೆಲೆಯು ನಿರ್ಧರಿಸಲ್ಪಡುವದು. ಈ ಕಡಿಮೆಯ ಬೆಲೆಯನ್ನು ನಿರ್ಧರಿಸುವ ಕಾಲಕ್ಕೇನೇ 'ಈಡು' ಅಥವಾ ಪ್ರತಿಫಲದ ಬೆಲೆಯನ್ನು ಬೆಳೆಯುವವರು ಕೆಲವೊಂದು ಹುಟ್ಟುವಳಿಗಳ ಮೇಲೆ ಕೊಡಬೇಕಾದ ತೆರಿಗೆಯನ್ನು ಗೊತ್ತುಪಡಿಸುವರು. ಹೀಗೆ ನಿರ್ಧರಿಸಲ್ಪಟ್ಟ ಕಡಿಮೆಯ ಬೆಲೆಯು ಪ್ರತಿ ಕೆಲ ವಾರಗಳಿಗೊಮ್ಮೆ ತಿದ್ದುಪಡೆಗೆ, ಪುನರ್ವಿಮರ್ಶೆಗೆ ಅಥವಾ ವಿಚಾರಕ್ಕೆ ಗುರಿಯಾಗುವದು. ಕೇಂದ್ರ ಲಿಲಾವಿನ ಕಚೇರಿಯುವದು ( ಸೆಂಟ್ರಲ್ ಬ್ಯೂರೊ ) ಗೊತ್ತುಪಡಿಸಿದ ಕ್ಷೀರ ಕಡಿಮೆಯ ಬೆಲೆಗೆ ಸರಿಯಾಗಿ ಅಥವಾ ಅದಕ್ಕಿಂತ ಹೆಚ್ಚಿಗೆ ಯಾವದೇ ಹುಟ್ಟುವಳಿಯು ಮಾರಲ್ಪಟ್ಟರೆ ಬೆಳೆಯುವವರು, ತಲಾ ಅಥವಾ ಪ್ರತಿಯೊಬ್ಬರು ಕಿಸು ಹಣವನ್ನು ಅಂದರೆ ಒಂದು ಕಿಲೊ (ಅಂದರೆ ೨·೨ ಪೌಂಡು) ಪ್ರತಿಯೊಂದು ಮಾರಾಟದ ಮೇಲೆ ಕೊಡಬೇಕಾಗುವದು. ಪ್ರತಿಯೊಂದು ಸರಕಿನ ಮೇಲೆ ಬೇರೆ ಬೇರೆ ನಿಧಿಯು ಕೂಡಿಸಲ್ಪಡುವದು. ಈ ನಿಧಿಯ ಎಲ್ಲ ವ್ಯವಸ್ಥೆ ಮೇಲ್ವಿಚಾರಣೆಗಳನ್ನು ಕೇಂದ್ರ ಲಿಲಾವಿನ ಕಚೇರಿ (ಬ್ಯೂರೊ)ಯು ಮಾಡುವದು.

# ನಿಧಿಯ ವಿನಿಯೋಗದ ವ್ಯವಸ್ಥೆ

ಕೇಂದ್ರ ಲಿಲಾವಿನ ಕಚೇರಿಯಿಂದ ನಿರ್ಧರಿಸಲ್ಪಟ್ಟ ತೀರ ಕಡಿಮೆಯ ಬೆಲೆಗಿಂತಲೂ ದರಗಳು ಇಳಿದಾಗ, ಲಿಲಾವಿನ ಸಂಸ್ಥೆಯ ವ್ಯವಸ್ಥಾಪಕನು ಮಾರುವದನ್ನು ನಿಲ್ಲಿಸಿ ಹುಟ್ಟುವಳಿಯನ್ನು ಮಾರಬೇಕೇ ಹೇಗೆ ಎಂಬ ಬಗ್ಗೆ ಕೇಂದ್ರ ಲಿಲಾವಿನ ಕಚೇರಿಯಿಂದ ಸಲಹೆ ಸೂಚನೆಗಳನ್ನು ಪಡೆಯುವನು. ಹೀಗೆ ಮಾರಲ್ಪಡದಿದ್ದ ಹುಟ್ಟುವಳಿಯನ್ನು ಅಥವಾ ಮಾಲನ್ನು ಮರಳಿ ಲಿಲಾವಿನ ಸಂಸ್ಥೆಗೆ ಒಯ್ದು, ಬೆಳೆಯುವವನಿಗೆ ಬೆಲೆಯಲ್ಲಿಯ ಕೊರತೆಯ ಹಣವನ್ನು ಕೊಡಲಾಗುವದು. ವೈಯಕ್ತಿಕ ಸರಕಿನ ನಿಧಿಯು ತೀರಿದ ಮೇಲೆ ಇದೇ ಉದ್ದೇಶಕ್ಕಾಗಿ ತೆಗೆದಿಡಲ್ಪಟ್ಟ ವಿಶೇಷ ನಿಧಿಯೊಳಗಿಂದ ಬೆಳೆಯುವವನಿಗೆ ಕೊಡಲಾಗುವದು. ಈ ವಿಶೇಷ ನಿಧಿಯು, ಈ ಮೊದಲೇ ವಿವರಿಸಿದಂತೆ ಪ್ರತಿಯೊಂದು ಲಿಲಾವಿನ ಸಂಸ್ಥೆಯ ಪರವಾಗಿ ಆದ ಒಟ್ಟು ವ್ಯವಹಾರದ ಮೇಲೆ ನೂರಕ್ಕೆ ೧ ರಂತೆ ತೆರಿಗೆಯ ರೂಪದಿಂದ ಕೂಡಿಸಲ್ಪಡುವದು. ೧೯೫೦ ರಲ್ಲಿ ಲಿಲಾವಿನ ಸಂಸ್ಥೆಗಳಿಗೆ ತರಲ್ಪಟ್ಟ ಎಲ್ಲ ಚಪ್ಪರ ಬದನೆ ( ಗೋಬದನೆ ಅಥವಾ ಟೋಮ್ಯಾಟೋ ) ಗಳ ಮೇಲಿನ ತೆರಿಗೆಯು ಒಂದು ಕಿಲೋ ಗ್ರ್ಯಾಮಿಗೆ ಒಂದು ಸೆಂಟಿನಂತಿದ್ದಿತು. ಸುಗ್ಗಿಯ ಆರಂಭದಲ್ಲಿ ಕಡಿಮೆಯ ಬೆಲೆಯು ಒಂದು ಕಿಲೋಗ್ರ್ಯಾಮಿಗೆ ಇಪ್ಪತ್ತು ಸೆಂಟುಗಳಷ್ಟಿದ್ದಿತು. ಪ್ರತಿಫಲದ ಬೆಲೆಯು ಒಳ್ಳೇ ಉತ್ತಮ ತರಗತಿಯ ಚಪ್ಪರ ಬದನೆಗಳಿಗೆ ಒಂದು ಕಿಲೋ ಗ್ರ್ಯಾಮಿಗೆ ಹದಿನಾರು ಸೆಂಟು, ಮತ್ತು ಎರಡನೆಯ ತರಗತಿಯ ಚಪ್ಪರ ಬದನೆಗಳಿಗೆ ಹನ್ನೆರಡು ಸೆಂಟು ಇದ್ದಿತು. ನಂತರ ಅವುಗಳನ್ನು ಮಾರುವ ಬೆಲೆಯು ೧೨ ಸೆಂಟುಗಳಿಗಿಳಿಯಿತು. ಮತ್ತು ಪ್ರತಿಫಲದ ಬೆಲೆಯು ಮೊದಲನೆಯ ತರಗತಿಯ ಚಪ್ಪರ ಬದನೆಗಳಿಗೆ ಹತ್ತು ಸೆಂಟು, ಎರಡನೆಯ ತರಗತಿಯವುಗಳಿಗೆ ಹತ್ತು ಸೆಂಟು, ಮತ್ತು ಮೂರನೆಯ ತರಗತಿಯವುಗಳಿಗ ಎಂಟು ಸೆಂಟುಗಳಷ್ಟಾಯಿತು.

## ( ಒಂದು ಗಿಲ್ಡರ = ೧೦೦ ಸೆಂಟು )

| ಅವಧಿ | ಮಾರಾಟದ ತೀರ ಕಡಿಮೆಯ ಬೆಲೆಯು | ತೆರಿಗೆ | ಈಡಿನ ಅಥವಾ ಪ್ರತಿಫಲದ ಬೆಲೆ ೧ ನೇ ತರಗತಿಯ ಮಾಲಿಗೆ | ೨ ನೇ ತರಗತಿಯ ಮಾಲಿಗೆ | ೩ ನೇ ತರಗತಿಯ ಮಾಲಿಗೆ |
|---|---|---|---|---|---|
| ೯\|೭-೨೨\|೭ | ೧ ಕಿಲೋಗ್ರಾಮಿಗೆ ೨೦ ಸೆಂಟು | ಒಂದು ಕಿಲೋಗ್ರಾಮಿಗೆ ಒಂದು ಸೆಂಟು | ೧೬ ಸೆಂಟು | ೧೨ ಸೆಂಟು | ೧೦ ಸೆಂಟು |
| ೨೩/೭--೧೮\|೧೧ | ೧ ಕಿಲೋಗ್ರಾಮಿಗೆ ೧೨ ಸೆಂಟು | ,, | ೧೦ ,, | ೧೦ ಸೆಂಟು | ೮ ,, |

೧೯೫೦ ರಲ್ಲಿ ಕಲೆ ಹಾಕಲ್ಪಟ್ಟ ಒಟ್ಟು ತೆರಿಗೆಯು F ೭೪೦,೦೦೦ ಆಯಿತು. ಇದರೊಳಗಿಂದ ಮಾರಲ್ಪಡದಿದ್ದ ಹುಟ್ಟುವಳಿಗಾಗಿ, ಬೆಳೆಯುವವರಿಗೆ F ೫೭೩೦೦೦ ಈಡಿನ ಬೆಲೆಯೆಂದು ಕೊಡಲಾಯಿತು. ೧೯೫೦ ಡಿಸೆಂಬರ ೩೧ ನೇ ತಾರೀಖಿಗೆ ಉಳಿದ F ೧೬೭೦೦೦ ಗಳನ್ನು ಮರುವರುಷದ ಲೆಕ್ಕಕ್ಕೆಳೆಯಲಾಯಿತು.

## ಕಾಯಿಪಲ್ಲೆ ಹಣ್ಣು ಹಂಪಲುಗಳಿಗಾಗಿ ವ್ಯಾಪಾರೀ ಮಂಡಲವು.
## ( ಮಾರ್ಕೇಟಿಂಗ ಬೋರ್ಡ )

೧೯೩೭ರಲ್ಲಿ 'ಏಕಮೆ ನಿಯಂತ್ರಣ' ಪದ್ಧತಿಯು ಬಳಕೆಗೆ ಬರಲು ಸರಕಾರದವರು ಮಾರ್ಕೇಟಿಂಗ ಬೋರ್ಡನ್ನು ಅಂದರೆ ವ್ಯಾಪಾರೀ ಮಂಡಲವನ್ನು ಸ್ಥಾಪಿಸಿದರು. ಸಹಕಾರಿ ಲಿಲಾವಿನ ಸಂಸ್ಥೆಗಳು ಒಟ್ಟು ವ್ಯವಹಾರದ ಮೇಲೆ ನೂರಕ್ಕೆ ೨ ರಷ್ಟು ತೆರಿಗೆಯನ್ನು ಕೊಡಬೇಕಾಗುವದು. ಇನ್ನೊಂದು ದೃಷ್ಟಿಯಿಂದ ನೋಡಿದರೆ ಇದು ನಿಜವಾಗಿಯೂ, ಒಕ್ಕಲುತನ, ವ್ಯಾಪಾರ ಮತ್ತು ಮೀನಿನ ವ್ಯವಸಾಯದ ಒಂದು ಖಾತೆಯೇ ಸರಿ. ಈ ಬೋರ್ಡಿನಲ್ಲಿ ಅಂದರೆ ಮಂಡಲದಲ್ಲಿ ಕೆಳಗಿನ ಪ್ರತಿನಿಧಿಗಳಿರುವರು.

೪ ಜನರು ಬೆಳೆಯುವವರು
೧ 'ಠೋಕ' ( ಗುತ್ತಿಗೆಯ ) ವ್ಯಾಪಾರಸ್ಥರು
೧ 'ಕಿರಕೋಳ '(ಚಿಲ್ಲರೆ) ವ್ಯಾಪಾರಸ್ಥರು
೧ 'ಪ್ರೊಸೆಸರ್' (ಅಂದರೆ ಮಾಲನ್ನು ರೂಪಾಂತರಗೊಳಿಸುವರು )
೧ ಕೂಲಿಕಾರ ಪ್ರತಿನಿಧಿಯು

} ಮಂತ್ರಿಯ ಸಮ್ಮತಿಗೊಳಪಟ್ಟು ಈ ನೇಮಣೂಕಿಗಳಾಗುವವು.

ಬೆಳೆಯುವವನೇ ಅವಶ್ಯವಾಗಿ ಚೇರಮನ್‌ನಾಗತಕ್ಕದ್ದು. ಅಥವಾ ಇರತಕ್ಕದ್ದು. ಚೇರಮನ್ನನಿಗೆ ನಿಷೇಧಾಜ್ಞೆಯ ( Veto ) ಅಧಿಕಾರವಿದೆ ಮಂತ್ರಿಗೆ ತೆಗೆದು ಹಾಕುವ ಅಥವಾ ರದ್ದುಗೊಳಿಸುವ ಅಧಿಕಾರವಿದೆ. ಹುಟ್ಟುವಳಿಯ ಉತ್ಪಾದನೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ನಡೆಯಿಸಿಕೊಂಡು ಹೋಗಲು ಮೂಲತಃ ವ್ಯಾಪಾರೀ ಮಂಡಲವು ಸ್ಥಾಪಿತವಾಯಿತು. ಬೆಳೆಯುವವರೆಲ್ಲರೂ ತಮ್ಮ ಹೆಸರುಗಳನ್ನು ನೋಂದಿಸಬೇಕಾಯಿತಲ್ಲದೆ, ಸಾಗುವಳಿಯಾಗಿ ಬೆಳೆಯಲ್ಪಟ್ಟ ಭೂಮಿಯ ಕ್ಷೇತ್ರದ ಬಗ್ಗೆ ಎಕರೆಗಳ ಅಂಕೆ ಸಂಖ್ಯೆಗಳನ್ನು ಪೂರೈಸಬೇಕಾಯಿತು. ಬೆಳೆಯುವವರಿಗೆ ಲೈಸನ್ಸುಗಳನ್ನು ( ವ್ಯವಹಾರ ನಡೆಯಿಸಲು ಹುಕುಮು ಅಥವಾ ಸನದು ) ಕೊಡಲಾಯಿತು. ಈ ಪದ್ಧತಿಯು ಇನ್ನೂ ಬಳಕೆಯಲ್ಲಿದೆ. ಬೆಳೆಯುವವರು ತಮ್ಮ ಹೆಸರುಗಳನ್ನು ನೋಂದಿಸಿ ಲೈಸನ್ಸುಗಳನ್ನು ಪಡೆಯಲೇಬೇಕಾಗುವದು. ಅವರಿಗೆ ಹಣ್ಣು ಹಂಪಲ ಕಾಯಿಪಲ್ಲೆ

ಗಳನ್ನು ಬೆಳೆಯಲು, ನಿರ್ದಿಷ್ಟ ಎಕರೆಗಳ ಭೂಮಿಯನ್ನು ಒಪ್ಪಿಸಿ ಕೊಡ ಲಾಗುವದು. ಹಣ್ಣು ಹಂಪಲ ಕಾಯಿಪಲ್ಲೆಗಳನ್ನು ಬೆಳೆಯುವವರು ತಮ್ಮ ಇಷ್ಟದಂತೆ ಬೇಕಾದುವನ್ನು ಬೆಳೆಯಬಹುದು. ಆದರೆ ಹೀಗೆ ಬೆಳೆಯುವ ಬೆಳೆಯು ಗೊತ್ತುಪಡಿಸಿದ ಎಕರೆಗಳನ್ನು ಮೀರಕೂಡದು. ಬೆಳೆಯುವವರು ಸರಕಾರದ ಆಜ್ಞೆಯನ್ನು ಅಮಲಿನಲ್ಲಿ ತರಲು ತಪ್ಪಿದರೆ, ಹೆಚ್ಚಿನ ಬೆಳೆ ಯನ್ನು ನಷ್ಟಪಡಿಸಿ, ಅವರಿಂದ ದಂಡ ವಸೂಲ ಮಾಡಲಾಗುವದು. ಬಾಗಾ ಯತ ಬೇಸಾಯವನ್ನು ಕೈಕೊಳ್ಳುವವರು ಕನಿಷ್ಠ ೨೬ ವರ್ಷದವರಾದರೂ ಇರಬೇಕು. ಅಲ್ಲದೆ ಈ ವಿಷಯದಲ್ಲಿ ಸುಶಿಕ್ಷಿತರಾಗಿ ಯೋಗ್ಯತಾ ಪತ್ರಿಕೆಗ ಳನ್ನು ಪಡೆದಿರಬೇಕು. ಕೆಲವೊಂದು ಸಂದರ್ಭಗಳಲ್ಲಿ ಸ್ಥಾನಿಕ ಸಮಿತಿಯ ವರು (ಕಮೀಟಿಯವರು) ಇಂಥವರ ಯೋಗ್ಯತೆಯ ಬಗ್ಗೆ ಸಾಕ್ಷೀಪತ್ರ ವನ್ನು ಕೊಟ್ಟರೆ, ಆಯಾ ವಿಷಯದಲ್ಲಿಯ ಯೋಗ್ಯತಾ ಪತ್ರಿಕೆಯಿಲ್ಲದೇನೇ ಬಾಗಾಯತ ಬೇಸಾಯವನ್ನು ಕೈಕೊಳ್ಳಲಿಕ್ಕೆ ಇಂಥ ಬೇಸಾಯಗಾರರಿಗೆ ಅಥವಾ ಬೆಳೆಯುವವರಿಗೆ ಸರಕಾರದವರು ಅಪ್ಪಣೆ ಕೊಡುವರು.

೧೯೪೮ ರ ಪೂರ್ವದಲ್ಲಿ ವ್ಯಾಪಾರೀ ಮಂಡಲವು ಗೊತ್ತುಪಡಿಸಿದ ತೀರ ಕಡಿಮೆಯ ಬೆಲೆಗೆ ಸರಕಾರವು ಹುಟ್ಟುವಳಿಯನ್ನು ಕೊಳ್ಳುತ್ತಿದ್ದಿತು. ಹುಟ್ಟುವಳಿಯು ನಿರ್ಧರಿಸಲ್ಪಟ್ಟ ತೀರ ಕಡಿಮೆಯ ಬೆಲೆಗಿಂತಲೂ ಕಡಿ ಮೆಯ ಬೆಲೆಗೆ ಮಾರಾಟವಾಗುವದಾದರೆ ದನಗಳ ಮೇವಿಗಾಗಿ ಸರಕಾರವು ಅದನ್ನು ತೀರ ಕಡಿಮೆಯ ದರದಿಂದ ಮಾರುತ್ತಿದ್ದಿತು. ಅಥವಾ ಆ ಹುಟ್ಟು ವಳಿಯನ್ನೇ ನಾಶಮಾಡುತ್ತಿದ್ದಿತು. ೧೯೪೮ ರಿಂದ ಸರಕಾರವು ಈಡಿನ ಅಥವಾ ಪ್ರತಿಫಲದ ನಿಧಿಯ ವಿನಿಯೋಗದ ವ್ಯವಸ್ಥೆಯನ್ನು ಸೆಂಟ್ರಲ್ ಬ್ಯೂರೋ ಅಂದರೆ ಕೇಂದ್ರ ಲಿಲಾವಿನ ಕಚೇರಿಗೆ, ಅದರ ಆಡಚಣೆಯ ಪ್ರಸಂಗದಲ್ಲಿ ನೆರವು ನೀಡುವ ಭರವಸೆಯಿಂದ, ಒಪ್ಪಿಸಿ ಕೊಟ್ಟಿದೆ. ವ್ಯಾಪಾ- ರೀ ಮಂಡಲವು ಕೇಂದ್ರ ಲಿಲಾವಿನ ಕಚೇರಿಯ ( ಬ್ಯೂರೋದ ) ಸಂಗಡ ವಿಚಾರ ವಿನಿಮಯ ಮಾಡಿ ಹುಟ್ಟುವಳಿಯ ನಿರ್ಯಾತಕ್ಕಾಗಿ, ಪರದೇಶ ಗಳೊಡನೆ ಕರಾರುಗಳನ್ನು ಮಾಡಿಕೊಳ್ಳುವ ಎಲ್ಲ ವಿಷಯದಲ್ಲಿಯೂ ವ್ಯವಸ್ಥೆಯನ್ನು ಮಾಡುತ್ತದೆ.

---

# ೭ ಖರೀದಿ-ವಿಕ್ರಿ ಸಂಘಗಳು



ಕಳೆದ ಶತಮಾನದಲ್ಲಿ ಅಂದರೆ ೧೮೭೦ ರಲ್ಲಿ ಕೃತ್ರಿಮ ಮೇವಿನ ಪದಾರ್ಥಗಳು ಮತ್ತು ಸುಪೀಕತೆಯ ಸಾಧನಗಳು ಹೆಚ್ಚಾಗಿ ಬಳಕೆಯಲ್ಲಿ ಬಂದವು. ಆದರೆ ಯೋಗ್ಯ ದರಕ್ಕೆ ಉತ್ತಮ ತರಗತಿಯ ಮೇವಿನ ವಸ್ತುಗಳನ್ನು ಸಂಪಾದಿಸುವದು ಒಕ್ಕಲಿಗನಿಗೆ ಬಹಳೇ ದುಸ್ತರವೆನಿಸಹತ್ತಿತು. ಆದುದರಿಂದ ಮೇವಿನ ಅಥವಾ ಪೋಷಕ ವಸ್ತುಗಳ ಮತ್ತು ಸುಪೀಕತೆಯ ಸಾಧನೆಗಳ ಪೂರೈಕೆಗಾಗಿ, ಖರೀದಿಗಾಗಿ ಒಕ್ಕಲಿಗರೆಲ್ಲರೂ ಸಹಕಾರ ತತ್ವದ ಮೇಲೆ ಸಂಘಟಿತರಾದರು. ಇಂಥ ಮೊದಲನೇ ಸಂಘವು ಸ್ಥಾಪಿತವಾದುದು ೧೮೭೭ ರಲ್ಲಿ. ಇಂಥ ಸಂಘಗಳ ಸದಸ್ಯರು ಬಹುತರವಾಗಿ ಎಲ್ಲರೂ ಒಕ್ಕಲಿಗರೇ ! ಹೊಣೆಗಾರಿಕೆಯೋ ಸಾಮಾನ್ಯವಾಗಿ ಅಪರಿಮಿತವಾದುದು ಅಥವಾ ಅನಿಯಮಿತವಾದುದು. ಸ್ಥಾನಿಕ ಸಂಸ್ಥೆಗಳು, ಸ್ಥಾನಿಕ ಪತ್ತಿನ ಬ್ಯಾಂಕುಗಳಿಂದಲೂ ಕೇಂದ್ರ ಸಹಕಾರಿ ಬ್ಯಾಂಕುಗಳಿಂದಲೂ ಹಣವನ್ನು ಸಾಲವಾಗಿ ಎತ್ತುವವು. ಯಾವನಾದರೊಬ್ಬನು ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟರೆ, ಅನಿಯಮಿತ ಹೊಣೆಗಾರಿಕೆಯ ಪರಿಣಾಮವಾಗಿ, ತಾನು ತುಂಬಬಹುದಾದ ತನ್ನ ಪಾಲಿನ ಹಣಕ್ಕಾಗಿ, ಕೆಲವೊಂದು ಹಣವನ್ನು ವರ್ಗಣಿ ರೂಪದಿಂದ ಕೊಡಬೇಕಾಗುವದು. ಈ ಸಂಸ್ಥೆಗಳು ಒಕ್ಕಲಿಗರಿಗೂ ಒಕ್ಕಲುತನಕ್ಕೂ ಅಗತ್ಯವಿರುವ ಸಾಮಾನುಗಳನ್ನು ಕೊಳ್ಳುವವು. ಅವರಂತೆಯೇ ಒಕ್ಕಲುತನದ ಹುಟ್ಟುವಳಿಯನ್ನು ಕೇಂದ್ರ ಸಂಸ್ಥೆಗಳ ಮುಖಾಂತರ ಮಾರುವವು. ಪ್ರಜಾಸತ್ತಾತ್ಮಕ ತತ್ವದ ಮೇಲೆ ಇವುಗಳ ಆಡಳಿತೆಯು ನಿರ್ವಹಿಸಲ್ಪಡುವದು. ಸರ್ವಸಾಧಾರಣ ಸಭೆಯ ಕಡೆಗೇನೇ ಎಲ್ಲಕ್ಕೂ ಹೆಚ್ಚಿನ ಮತ್ತು ಮೇಲಿನ ಅಧಿಕಾರವಿರುವದು. ಪ್ರತಿಯೊಬ್ಬ ಸದಸ್ಯನಿಗೆ, ಒಂದೇ ಒಂದು ಮತವು. ೧೬೦,೦೦೦ ಸದಸ್ಯರನ್ನೊಳಗೊಂಡ ೧೧೬೧ ಸ್ಥಾನಿಕ ಸಂಸ್ಥೆಗಳಿವೆ. ಇವು ತಮ್ಮ ಸದಸ್ಯರಿಗೆ ಮೇವಿನ ವಸ್ತು, ಸುಪೀಕತೆಯ ಸಾಧನೆ, ಬೀಜದ ಆಲುಗಡ್ಡೆ, ಉರುವಲು, ಯಂತ್ರ ಒಕ್ಕಲುತನಕ್ಕೆ ಅಗತ್ಯವಿರುವ ಮತ್ತಿತರ ಪದಾರ್ಥಗಳನ್ನು ಪೂರೈಸುತ್ತವೆ.

ಅಂತೆಯೇ ಸದಸ್ಯರ ಒಕ್ಕಲುತನದ ಹುಟ್ಟುವಳಿಯನ್ನು ಮಾರಾಟ ಮಾಡು ತ್ತವೆ. ಬಹುತರವಾಗಿ ಎಲ್ಲ ಸಂಸ್ಥೆಗಳಲ್ಲಿ ಯೋಗ್ಯವಾದ 'ಗುದಾಮು' (ಉಗ್ರಾಣ) ಗಳ ಮತ್ತು ಆಹಾರವನ್ನು ರೂಪಾಂತರಿಸುವ ಯಾಂತ್ರಿಕ ಸಾಮಗ್ರಿಗಳ ವ್ಯವಸ್ಥೆಯಿದೆ. ಸ್ಥಾನಿಕ ಸಹಕಾರಿ ಸಂಸ್ಥೆಗಳ ಒಟ್ಟು ವಾರ್ಷಿಕ ವ್ಯವಹಾರವು ಸುಮಾರು ೨,೦೦೧೫೦ ಟನ್ನುಗಳಷ್ಟಾಗುವದಲ್ಲದೆ, ಇದರ ಬೆಲೆಯು ೧೩೦೦,೦೦೦೦೦ ಗಿಲ್ಡರಗಳಷ್ಟಾಗುವದು. ಬೀಜ ಮಿಡಿಚೆಗಳ ಮತ್ತು ಕೃತ್ರಿಮ ಸುಧಾರಣೆಯ ಸಾಧನೆಗಳ ಒಟ್ಟು ಪೂರೈಕೆಯಲ್ಲಿ ನೂರಕ್ಕೆ ಆರವತ್ತರಷ್ಟು ಸಹಕಾರಿ ಸಂಸ್ಥೆಗಳಿಂದ ಪೂರೈಸಲ್ಪಡುವದೆಂದು ಅಂದಾಜು ಮಾಡಲಾಗಿದೆ. ಐದು ಕೇಂದ್ರ ಸಂಸ್ಥೆಗಳಿವೆ. ಸ್ಥಾನಿಕ ಸಹಕಾರಿ ಸಂಸ್ಥೆಗ-ಳಲ್ಲಿ ಬಹುಮಟ್ಟಿಗೆ ಎಲ್ಲ ಸಂಸ್ಥೆಗಳು ಮೇಲಿನ ಐದು ಕೇಂದ್ರ ಸಂಸ್ಥೆಗಳಲ್ಲಿ ಒಂದಿಲ್ಲೊಂದು ಕೇಂದ್ರ ಸಂಸ್ಥೆಗೆ ಜೋಡಿಸಲ್ಪಟ್ಟಿವೆ. ಸ್ಥಾನಿಕ ಸಹಕಾರಿ ಸಂಸ್ಥೆಗಳೇ ಈ ಕೇಂದ್ರ ಸಂಸ್ಥೆಗಳ ಸದಸ್ಯರು. ಈ ಕೇಂದ್ರ ಸಂಸ್ಥೆಗಳ ಹೊಣೆಗಾರಿಕೆಯು ಪರಿಮಿತ ಅಥವಾ ನಿಯಮಿತವಾದುದು ಈ ಕೇಂದ್ರ ಸಂಸ್ಥೆಗಳ ಪಾಲು (ಶೇರು) ಬಂಡವಾಳದ ಸಲುವಾಗಿ ಸ್ಥಾನಿಕ ಸಂಸ್ಥೆ ಗಳು ಹಣವನ್ನು ತುಂಬಬೇಕಾಗುವದು. ಕೇಂದ್ರ ಸಂಸ್ಥೆಗಳು ತಮಗಾದ ನಿವಳ ಲಾಭದಲ್ಲಿ ಕನಿಷ್ಟ ಪಕ್ಷಕ್ಕೆ ನೂರಕ್ಕೆ ೨೫ ರಷ್ಟು ಕಾಯ್ದಿಟ್ಟ ನಿಧಿಗೆ ತೆಗೆಯುವವು. ಉಳಿದ ಲಾಭದೊಳಗಿಂದ ವಸೂಲಾದ ಶೇರ ಅಂದರೆ ಪಾಲು ಬಂಡವಾಳದ ಮೇಲೆ ನೂರಕ್ಕೆ ಆರರಂತೆ ಡಿವ್ಹಿಡೆಂಡನ್ನು ಹಂಚು-ವವು. ಉಳಿದುದನ್ನು ಸದಸ್ಯರಿಗೆ ಗಿರಾಕಿಗಳ ನಡುವೆ ಅವರು ಖರೀದಿ ಮಾಡಿದ ಮಾಲಿನ ಪ್ರಮಾಣದಲ್ಲಿ ಹಂಚುವವು. ಎಲ್ಲಕ್ಕೂ ಹೆಚ್ಚಿನ ಅಧಿಕಾ-ರವುಳ್ಳ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ ಸಮಿತಿಯು (ಈ ಕೇಂದ್ರ ಸಂಸ್ಥೆಯ) ಆಡಳಿತೆಯನ್ನು ನೋಡಿಕೊಳ್ಳುವದು. ಪ್ರತಿಯೊಬ್ಬ ಸದಸ್ಯ-ನಿಗೆ ಒಂದು ಮತವಿರುವದು. ಎಲ್ಲಕ್ಕೂ ದೊಡ್ಡ ಕೇಂದ್ರ ಸಂಸ್ಥೆಯು ರಾಟ ರಡ್ಯಾಮಿನಲ್ಲಿರುವದು. ದೇಶದ ಉತ್ತರ ಮತ್ತು ಪೂರ್ವ ಭಾಗಗಳಲ್ಲೆಲ್ಲ, ಇದು ತನ್ನ ಕಾರ್ಯಕ್ಷೇತ್ರದ ಚಟುವಟಿಕೆಗಳ ವ್ಯಾಪ್ತಿಯನ್ನು ಹರಡಿದೆ. ಸುಮಾರು ೭೦೦೦೦ ಸದಸ್ಯರನ್ನೊಳಗೊಂಡ ೪೬೫ ಸ್ಥಾನಿಕ ಸಹಕಾರಿ ಸಂಸ್ಥೆಗಳು ಇದಕ್ಕೆ ಸಮಾವೇಶವಾಗಿವೆ. ೧೯೫೦-೫೧ ರಲ್ಲಿ ಇದರ ಒಟ್ಟು ವ್ಯವಹಾರವು ೨೧೪೦೦,೦೦೦೦ ಗಿಲ್ಡರುಗಳಷ್ಟಾಯಿತು. ಈ ದೊಡ್ಡ ಸಂಸ್ಥೆ

ಯಲ್ಲಿವೆ, ಇನ್ನುಳಿದ ನಾಲ್ಕು ಕೇಂದ್ರ ಸಂಸ್ಥೆಗಳು ವೇಗಹೆಲ್ಲಿನಲ್ಲಿಯ ನಾರ್ಥ ಬ್ರ್ಯಾಬಂಟ ಕ್ರಿಶ್ಚಿಯನ್ ಫಾರ್ಮರ್ಸ ಯುನಿಯನ್ನಿನ ಸಹಕಾರೀ ಕೇಂದ್ರ ವ್ಯಾಪಾರೀ ಸಂಸ್ಥೆಗೆ ಜೋಡಿಸಲ್ಪಟ್ಟಿವೆ. ಈ ನಾಲ್ಕೂ ಕೇಂದ್ರ ಸಂಸ್ಥೆಗಳು ರೋಮನ್ ಕ್ಯಾಥೋಲಿಕ್ ಸಂಸ್ಥೆಗಳಾಗಿವೆ. ಈ ನಾಲ್ಕೂ ಸಂಸ್ಥೆಗಳು ೧೯೩೯ ರಲ್ಲಿ ಕೂಡಿಕೊಂಡು ರಾಟರ್‌ಡ್ಯಾಮಿನಲ್ಲಿ ತಮ್ಮ ಪ್ರಧಾನ ಕಚೇರಿಯನ್ನು ಮಾಡಿಕೊಂಡಿವೆ. ೧೯೪೮ ರಲ್ಲಿ ಈ ನಾಲ್ಕೂ ಸಂಸ್ಥೆಗಳ ಒಟ್ಟು ವ್ಯವಹಾರವು ೧೪೦,೦೦೦,೦೦೦ ಗಿಲ್ಡರಗಳಷ್ಟು ಅಂದರೆ ೧೭೫,೦೦೦,೦೦೦ ರೂಪಾಯಿಗಳಷ್ಟಾಯಿತು.

ಈ ಕೇಂದ್ರ ಸಂಸ್ಥೆಗಳು ಮೇವು ಮಿಡಿಚಿ, ಕೃತ್ರಿಮ ಗೊಬ್ಬರ, ಬೀಜ, ಬೀಜದ ಆಲುಗಡ್ಡೆ, ಕ್ರಿಮಿನಾಶಕ ಔಷಧ, ಒಕ್ಕಲುತನದ ಉಪಕ-ರಣ ಈ ಮೊದಲಾದವುಗಳನ್ನು ಕೇಂದ್ರವಾಗಿ ಕೊಳ್ಳುವವು. ಅದರಂತೆಯೇ ಕಾಳು-ಕಡಿ, ದ್ವಿದಳ ಧಾನ್ಯ, ಆಲುಗಡ್ಡೆ ಒಣ ಹುಲ್ಲು, ವನಸ್ಪತಿ ಈ ಮೊದಲಾದ ಒಕ್ಕಲುತನದ ಹುಟ್ಟುವಳಿಯನ್ನು ಕೇಂದ್ರವಾಗಿ ಮಾರಾಟ ಮಾಡುವವು. ಕೇಂದ್ರ ಸಂಸ್ಥೆಗಳ ಪ್ರಧಾನ ಕಚೇರಿಗಳಲ್ಲಿ ಖರೀದಿ ಮಾಡಲ್ಪಡತಕ್ಕ ವಸ್ತುಗಳು ಕೇಂದ್ರೀಕೃತವಾಗಲು, ಪ್ರಧಾನ ಕಚೇರಿಗಳೇ ಅವುಗಳನ್ನು ಖರೀದಿ ಮಾಡುವವು. ಆದರೆ ಮಾರಾಟ ಮಾಡಲ್ಪಡತಕ್ಕ ವಸ್ತುಗಳು ಕೆಲಮ-ಟ್ಟಿಗೆ ವಿಕೇಂದ್ರೀಕೃತವಾಗುವವು. ಈ ಕೇಂದ್ರ ಸಂಸ್ಥೆಗಳಿಗೆ ಶಾಖೆಗಳೂ, ಮಾ-ಲನ್ನು ಸಂಗ್ರಹಿಸಿಡಲು, ಕೇಂದ್ರ ಉಗ್ರಾಣಗಳೂ (ವಖಾರಗಳೂ) ಉಂಟು. ಸದಸ್ಯರಿಗೆ ಮಾಲಿನ ಮಾರಾಟವೂ ಒಪ್ಪಿಸುವಿಕೆಯೂ ( ಬಟವಡೆ ) ಪ್ರಧಾನ ಕಚೇರಿಗಳಿಂದ ಶಾಖಾ ಕಚೇರಿಗಳಿಂದ, ಕೇಂದ್ರ ಉಗ್ರಾಣಗಳಿಂದ ಆಗುವದು. ವೇಘಹೆಲ್ಲಿನಲ್ಲಿಯ ದಿ ಕೋ ಆಪರೇಟಿವ್ಹ ಟ್ರೇಡಿಂಗ ಕಂಪನಿಯ ( ಸಹಕಾರಿ ವ್ಯಾಪಾರೀ ಮಂಡಲದ ) ವ್ಯವಹಾರದ ಕೆಳಗಿನ ಅಂಕೆ ಸಂಖ್ಯೆಗಳ ಮೇಲಿಂದ ಈ ಕೇಂದ್ರ ಸಂಸ್ಥೆಗಳ ವ್ಯವಹಾರದ ಕಲ್ಪನೆಯನ್ನು ಮಾಡಿಕೊಳ್ಳಬಹುದು.

| ವರ್ಷ | ಸಭಾಸದರ ಸಂಖ್ಯೆ | ಮಳಿಗೆ ಅಥವಾ ವಖಾರು ಗಳ ಸಂಖ್ಯೆ | ಒಂದು ಸಾವಿರ ಕಿಲೋಗ್ರಾಮು ಗಳ ಟನ್ನುಗಳಲ್ಲಿ ವ್ಯವಹಾರವು | ಗಿಲ್ಡರುಗಳಲ್ಲಿ ವ್ಯವಹಾರವು |
|---|---|---|---|---|
| ೧೯೧೨ | ೩೨ | ೫ | ೬೧೦೦ | ೧೭೧,೯೯೦ |
| ೧೯೧೫ | ೩೯ | ೧೨ | ೯೮೧೦ | ೯೦೩೪೦೨ |
| ೧೯೧೯ | ೧೫೫ | ೧೦೫ | ೪೭೨೬೦ | ೬೫೫೦೪೮೯ |
| ೧೯೨೩ | ೧೯೬ | ೧೩೨ | ೧೬೦೮೩೦ | ೧೦೯೮೭೪೬೨ |
| ೧೯೨೭ | ೨೦೮ | ೧೪೫ | ೨೪೩೧೭೦ | ೧೬೫೨೯೭೬೮ |
| ೧೯೩೧ | ೨೫೦ | ೨೦೭ | ೩೩೦೭೩೦ | ೧೯೦೪೫೭೧೮ |
| ೧೯೩೫ | ೨೬೫ | ೨೨೩ | ೩೬೬೧೮೦ | ೧೪೨೮೬೦೮೨ |
| ೧೯೩೮ | ೨೬೮ | ೨೩೭ | ೪೬೭೧೮೯ | ೨೨೧೩೫೬೯೦ |
| ೧೯೪೪ | ೨೪೭ | ೨೩೯ | ೬೯೧೫೭ | ೫೮೮೬೨೩೬ |
| ೧೯೪೮ | ೨೪೭ | ೨೩೯ | ೨೫೮೦೦೯ | ೩೭೧೧೪೨೬೪ |

# ೭ ತತ್ತಿ ವ್ಯಾಪಾರದ ಸಂಘಗಳು



ಡಚ್ಚ ಒಕ್ಕಲಿಗನು ತನ್ನ ತತ್ತಿಗಳನ್ನು ಕಲೆಹಾಕಿ, ಗಂಟುಕಟ್ಟಿ, ಸಹಕಾರಿ ಸಂಘಗಳ ಮುಖಾಂತರ ಪಡಗಿಗೆ ಹಾಕಿ, ಮಾರುವ ವ್ಯವಸ್ಥೆ ಮಾಡುವನು. ೬೦೦೦೦ ಸದಸ್ಯರನ್ನೊಳಗೊಂಡ, ತತ್ತಿಗಳನ್ನು ಕಲೆಹಾಕಿ ಪ್ಯಾಕು ಮಾಡಿ ಅಂದರೆ ಗಂಟುಕಟ್ಟಿ ಕಳುಹುವ ಏರ್ಪಾಡುಮಾಡುವ ೮೦೦ ಸ್ಥಾನಿಕ ಸ್ಟೇಶನ್ನುಗಳಿವೆ. ಇಂಥ ಸ್ಟೇಶನ್ನುಗಳು ಸಂಘಟಿತವಾಗಿ ಒಂದೊಂದು ಕೇಂದ್ರ ಸಂಸ್ಥೆಯಾಗುವವು. ಇಂಥ ಕೇಂದ್ರ ಸಂಸ್ಥೆಗಳು ೪೪ ಇವೆ. ಈ ಕೇಂದ್ರ ಸಂಸ್ಥೆಗಳು ಕೂಡಿ ಒಂದು ರಾಷ್ಟ್ರೀಯ ಸಂಸ್ಥೆಯಾಗುವದು. ಈ ಎಲ್ಲ ಸಂಘಗಳ ವಾರ್ಷಿಕ ಒಟ್ಟು ವ್ಯವಹಾರದ ಸರಾಸರಿಯು ೨೯೦೦೦೦೦೦ ಗಿಲ್ಡರುಗಳಷ್ಟು (ಅಂದರೆ ೩೬೬೯೦೦೦೦/- ರೂಪಾಯಿಗಳಷ್ಟು) ಆಗುವದು.

೧೯ ನೇ ಶತಮಾನದಲ್ಲಿ ನೆದರ್ಲಂಡಿನಲ್ಲಿಯ ಸಣ್ಣ ಸಣ್ಣ ಒಕ್ಕಲಿಗರು ಸಹಾಯಕ ಉದ್ಯೋಗವೆಂದು ಕೋಳಿಗಳನ್ನು ಸಾಕುತ್ತಿದ್ದರು. ಅವರು ತಮ್ಮ ಕೋಳಿಗಳ ಮರಿಗಳ ಬಗ್ಗೆ ಹೆಚ್ಚು ಲಕ್ಷ್ಯ ಪೂರೈಸುತ್ತಿರಲಿಲ್ಲ. ಈ ಮರಿಗಳು ಹೊಲಗಳಲ್ಲಿಯ ಹೊಲಗಳ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ತಮ್ಮ ಆಹಾರವನ್ನು ಅರಿಸಿಕೊಳ್ಳಬೇಕಾಗುತ್ತಿದ್ದಿತು. ಈ ಮರಿಗಳ ಜಾತಿಗಳನ್ನು ಆಯ್ದುಕೊಳ್ಳುವಲ್ಲಿ ಸಹ ಅವರು ಸಾಕಷ್ಟು ಕಾಳಜಿಯನ್ನು ತೆಗೆದುಕೊಳ್ಳುತ್ತಿರಲಿಲ್ಲ. ಪ್ರತಿವಾರವೂ ತಾವು ತಮ್ಮ ತತ್ತಿಗಳನ್ನು ಸಮೀಪದ ಪಟ್ಟಣಗಳಿಗೆ ಒಯ್ದು ಅಲ್ಲಿ ತಮ್ಮ ಕುಟುಂಬದ ಜನರಿಗೆ ಅಗತ್ಯವಿರುವ ಅರಿವೆಯನ್ನೊ ಕಿರಾಣಿಯ ಸಾಮಾನನ್ನೊ ಕೊಳ್ಳುವ ಸಲುವಾಗಿ ಜವಳೀ ಅಂಗಡಿಯಲ್ಲಿಯೋ ಕಿರಾಣಿ ಅಂಗಡಿಯಲ್ಲಿಯೋ ವಿನಿಮಯ ರೂಪದಿಂದ ಕೊಟ್ಟು ಬಿಡುತ್ತಿದ್ದರು. ತತ್ತಿಯ ಬೆಲೆಯು ಅದು ಉತ್ತಮ ಸ್ಥಿತಿಯಲ್ಲಿರುವವರೆಗೆ ಮಾತ್ರ ಇರುವದರಿಂದ ಅವುಗಳಿಗೆ ಕಡಿಮೆಯ ಬೆಲೆ ಬಂದರೂ ಕೂಡ ಒಕ್ಕಲಿಗರು ಅವುಗಳನ್ನು ತಿರುಗಿ ಮನೆಗೆ ತರುತ್ತಿ

ದ್ದಿಲ್ಲ. ಹೀಗಾಗಿ ತತ್ತಿ ಮಾರುವ ಒಕ್ಕಲಿಗನು ಸಂಪೂರ್ಣವಾಗಿ ಕೊಳ್ಳುವ
ವ್ಯಾಪಾರಸ್ಥರ ಕೃಪಾಛತ್ರದಲ್ಲಿರುವನು, ವಿನಿಮಯಕ್ಕೆ ಅವರು ಕೊಟ್ಟಷ್ಟನ್ನೇ
ತೆಗೆದುಕೊಂಡು ಹೋಗಬೇಕಾಗುತ್ತಿದ್ದಿತು. ಹೀಗಾಗಿ ತತ್ತಿಗಳ ಮತ್ತು
ಕೋಶಗಳ ನಿಯಂತ್ರಣವೆಲ್ಲ ನಡುವಿನ ದಲಾಲರ ಕೈಯಲ್ಲಿಯೇ ಉಳಿ
ದಿದ್ದಿತು. ಹೀಗಾಗಿ ಒಕ್ಕಲಿಗನು ಸಂಪೂರ್ಣವಾಗಿ ಸುಲಿಯಲ್ಪಡುತ್ತಿದ್ದನು.
ತತ್ತಿಗಳ ಹುಟ್ಟುವಳಿಯ ಪ್ರಮಾಣವೂ ತೀರ ಕಡಿಮೆಯಿದ್ದಿತು. ಅಲ್ಲದೆ
ಅವುಗಳ ತರಗತಿಯೂ ತೀರ ಕೆಳಮಟ್ಟದ್ದಿದ್ದಿತು. ಈ ಅವ್ಯವಸ್ಥೆಯು ಕ್ರಮ
ವಾಗಿ ಒಕ್ಕಲಿಗರಲ್ಲಿ ತಮ್ಮಷ್ಟಕ್ಕೆ ತಾವೇ ಇದರ ವ್ಯವಸ್ಥೆಯನ್ನು ಮಾಡಿ
ಕೊಳ್ಳಬೇಕೆಂಬ ಒಂದು ತೀವ್ರ ಆಸಕ್ತಿಯನ್ನು ಹುಟ್ಟಿಸಿತು. ಇದರ
ಪರಿಣಾಮವಾಗಿ ಅವರು ತತ್ತಿಗಳನ್ನು ಕಲೆಹಾಕಿ, ಸಂಗ್ರಹಿಸಿ ಹಂಚುವ
ವ್ಯವಸ್ಥೆಯನ್ನು ಮಾಡುವ ಸಲುವಾಗಿ ಸಂಘಗಳನ್ನು ಸ್ಥಾಪಿಸಿದರು.
ನಮ್ರವಾಗಿ ಇದರ ಆರಂಭವಾದರೂ ವಿಕಾಸವು ಮಾತ್ರ ತೀವ್ರಗತಿಯು
ಳ್ಳದ್ದಾಯಿತು. ತತ್ತಿಗಳನ್ನು ಕಲೆಹಾಕುವ ಸಂಘಗಳು ದೇಶದ ತುಂಬೆಲ್ಲ
ಸ್ಥಾಪಿತವಾದವು. ತತ್ತಿಗಳನ್ನು ಕಲೆಹಾಕಿ ಕಳುಹುವ ಕೇಂದ್ರಗಳ ಸದ
ಸ್ಯರು ಒಕ್ಕಲಿಗರೇ ಇರುವರು. ಈ ಕೇಂದ್ರಗಳ ಅಥವಾ ಸ್ಟೇಶನ್ನುಗಳ
ಮುಖ್ಯ ಹೊಣೆಯೆಂದರೆ ತತ್ತಿಗಳನ್ನು ಕಲೆಹಾಕಿ, ಅವುಗಳ ತರಗತಿಗಳ
ಪ್ರಕಾರ ವಿಂಗಡಿಸಿ, ಸುರಕ್ಷಿತವಾಗಿ ಕಳುಹುವದೇ ಸರಿ. ಈ ಸ್ಟೇಶನ್ನುಗಳು
ಏಜಂಟರಂತೆ ಕೆಲಸ ಸಾಗಿಸುತ್ತವೆ. ಆರಿಸಲ್ಪಟ್ಟ ವ್ಯವಸ್ಥಾಪಕ ಸಮಿ
ತಿಯು ಈ ಸ್ಟೇಶನ್ನುಗಳ ಆಡಳಿತೆಯನ್ನು ನೋಡಿಕೊಳ್ಳುತ್ತದೆ. ಸಾಮಾ
ನ್ಯವಾಗಿ ಪ್ರತಿಯೊಂದು ಸ್ಟೇಶನ್ನಿನಲ್ಲಿ ಇಬ್ಬರು ದುಡಿಯುತ್ತಿರುವರು.
ಈ ಇಬ್ಬರೂ ಹಣ, ಲೆಕ್ಕಪತ್ರ, ಒಕ್ಕಲಿಗರಿಗೆ ತತ್ತಿಗಳ ಬೆಲೆಯನ್ನು
ಕೊಡುವದು, ತತ್ತಿಗಳನ್ನು ಕಲೆಹಾಕುವದು, ಅವುಗಳ ತರಗತಿಯ ಪ್ರಕಾರ
ವಿಂಗಡಿಸುವದು ಮತ್ತು ಅವುಗಳನ್ನು ರವಾನಿಸುವದು ಈ ಮೊದಲಾದ
ವಿಷಯಗಳಲ್ಲಿ ಹೊಣೆಗಾರರಾಗಿರುವರು. ಇವರ ನೇಮಣೂಕಿಯನ್ನು
ಸಂಘವು ಕೇಂದ್ರಸಂಸ್ಥೆಯ ಸಮ್ಮತಿಗೊಳಪಟ್ಟು ಮಾಡುವದು ಈ ಇಬ್ಬರೂ
ಕೇಂದ್ರ ಸಂಸ್ಥೆಗೆ ಕಳುಹುವ ತತ್ತಿಗಳ ತರಗತಿ ಮತ್ತು ಪ್ರಮಾಣಗಳ
ಮೇಲಿಂದ ಎಲ್ಲಕ್ಕೂ ಮೇಲಿನ ಸಂಸ್ಥೆಯಿಂದ (ಅಂದರೆ ಈ ಕೇಂದ್ರ
ಸಂಸ್ಥೆಯಿಂದ) ಇವರಿಗೆ ಸಂಬಳ ಸಿಗುವದು. ಪ್ರತಿಯೊಬ್ಬ ಒಕ್ಕಲಿಗನೂ

ತತ್ತಿ ಕಳುಹುವ ಒಂದೊಂದು ಸ್ಟೇಶನ್ನಿನ ವ್ಯವಸ್ಥೆಯನ್ನು ಮಾಡಿಕೊಂಡಿ
ರುವರು. ಅವರು ಇಂಥ ಒಂದು ಸ್ಟೇಶನ್ನನ್ನು ಆರಿಸಿ, ಅದಕ್ಕೆ ಸದಸ್ಯ
ನಾದ ನಂತರ, ತನ್ನ ಎಲ್ಲ ತತ್ತಿಗಳನ್ನು ಅಲ್ಲಿಗೇನೇ ತರಬೇಕಾಗುವದು. ಈ
ಸ್ಟೇಶನ್ನಿನಲ್ಲಿ (ತತ್ತಿಮಾರುವ ಕೂಟದ ಸ್ಥಳದಲ್ಲಿ,) ತತ್ತಿಗಳು ಬಂದ
ಕೂಡಲೇ ತರಗತಿಗಳ ಪ್ರಕಾರ ಅವುಗಳನ್ನು ಪ್ರತ್ಯೇಕಿಸಿ, ಕೇಂದ್ರ ಸಂಸ್ಥೆಗೆ
ಕಳುಹುವ ಸಿದ್ಧತೆಯಿಂದ ಒಂದು ಪೆಟ್ಟಿಗೆಯಲ್ಲಿಡುವರು. ಕೇಂದ್ರಸಂಸ್ಥೆಯ
ಬಂಡಿ ಅಥವಾ ಮೋಟರು ವಾರಕ್ಕೊಮ್ಮೆ ಈ ಎಲ್ಲ ತತ್ತಿಗಳನ್ನು ಕೇಂದ್ರ
ಸಂಸ್ಥೆಗೆ ಒಯ್ಯುವದು. ಕೇಂದ್ರ ಸಂಸ್ಥೆಯು ಮತ್ತೆ ಈ ಎಲ್ಲ ತತ್ತಿಗಳ
ತರಗತಿಗಳನ್ನು ಮಾಡಿ, ಅವುಗಳ ತಾತ್ಕಾಲಿಕ ಬೆಲೆಯನ್ನು ಗೊತ್ತುಪಡಿಸಿ
ನಂತರ ತತ್ತಿ ಕಳುಹುವ ಸ್ಟೇಶನ್ನಿಗೆ ಅವುಗಳನ್ನು ಕಳುಹಿ ಸಂಬಂಧಿಸಿದ
ಒಕ್ಕಲಿಗರಿಗೆ ಅವುಗಳ ಬೆಲೆಯನ್ನು ಕೊಡಲು ತಿಳಿಸುವದು. ತತ್ತಿಗಳು
ಕನಿಷ್ಟ ತರಗತಿಯವಿದ್ದರೆ ತಿರುಗಿ ಒಕ್ಕಲಿಗನಿಗೆ ಕೊಡಲ್ಪಡುವವು. ಕೇಂದ್ರ
ಸಂಸ್ಥೆಯ ಗೊತ್ತು ಪಡಿಸುವ ಬೆಲೆಯು ತತ್ತಿಗಳ ತರಗತಿ ಮತ್ತು ಪ್ರಮಾ
ಣವನ್ನವಲಂಬಿಸಿರುವದೆಂದು ಮತ್ತೆ ಹೇಳಬೇಕಾಗಿಲ್ಲ.

ತತ್ತಿ ಕಳುಹುವ ಸ್ಟೇಶನ್ನುಗಳು ಅಥವಾ ಸಂಘಗಳು ಕೂಡಿ ಕೇಂದ್ರ
ಸಂಸ್ಥೆಗಳನ್ನು ಮಾಡಿಕೊಂಡಿವೆ. ಅಂದಬಳಿಕ ಈ ಸ್ಟೇಶನ್ನುಗಳು ಕೇಂದ್ರ
ಸಂಸ್ಥೆಗಳ ಸದಸ್ಯತ್ವವನ್ನು ವಹಿಸಿವೆಯೆಂದು ಮೇಲೆಯೇ ಕಾಣುತ್ತದೆ.
ಕೇಂದ್ರ ಸಂಸ್ಥೆಯು ತತ್ತಿಗಳನ್ನು ದೊಡ್ಡ ದೊಡ್ಡ ಪೇಟೆಗಳಿಗೆ ಕಳುಹುವ
ವ್ಯವಸ್ಥೆಮಾಡುತ್ತದೆ. ಆದುದರಿಂದ ತತ್ತಿಗಳನ್ನು ಸಂಗ್ರಹಿಸಿಡಲು ಅದಕ್ಕೆ
ಉತ್ತಮವಾದ ಉಗ್ರಾಣಗಳ ವ್ಯವಸ್ಥೆಯಿದೆ. ವರ್ಷದ ಕೊನೆಗೆ ಲೆಕ್ಕವೆಲ್ಲ
ಬರೆಯಲ್ಪಟ್ಟು ಆಢಾವೆಯು ಸಿದ್ಧವಾದ ಮೇಲೆ, ಕೇಂದ್ರಸಂಸ್ಥೆಯು ತತ್ತಿ
ಕಳಹುವ ಸ್ಟೇಶನ್ನುಗಳು ಆಯಾವರ್ಷದಲ್ಲಿ ತಮ್ಮ ಸಂಗಡ ಮಾಡಿದ
ತತ್ತಿಯ ವ್ಯವಹಾರದ ಪ್ರಮಾಣದಲ್ಲಿ ಅವಕ್ಕೆ ಆ ನಿವಳ ಲಾಭದೊಳಗಿಂದ
ಕೆಲವೊಂದು ಪ್ರಮಾಣದಲ್ಲಿ ಬೋನಸು (ಅಥವಾ ಇನಾಮು) ರಿಬೇಟು
(ದರದಲ್ಲಿ ಸವಲತ್ತನ್ನು) ಕೊಡುವದು. ತತ್ತಿ ಕಳಹುವ ಸ್ಟೇಶನ್ನ ಅಥವಾ
ಕೂಟಗಳು ಅದರಂತೆಯೇ ತಮ್ಮ ಒಕ್ಕಲಿಗರಿಗೆ ' ರಿಬೇಟ' ನ್ನು ಹಂಚು
ವವು. ತತ್ತಿಗಳನ್ನು ಕಳಿಹಾಕುವ ಹೊಣೆಯು ಈ ಸ್ಟೇಶನ್ನುಗಳದಿದ್ದರೆ

ಅವುಗಳನ್ನು ಮಾರುವ ಹೊಣೆಯು ಕೇಂದ್ರ ಸಂಸ್ಥೆಗಳದಿದೆ. ಆದುದರಿಂದ ಕೇಂದ್ರ ಸಂಸ್ಥೆಯು ಈ ಸ್ಟೇಶನ್ನಗಳಿಂದ ತತ್ತಿಗಳನ್ನು ಅನುಕೂಲವಾದ ಪೇಟೆಗಳಿಗೆ ಒಯ್ಯುವ ಸಾರಿಗೆಯ ವ್ಯವಸ್ಥೆಯನ್ನು ಮಾಡುತ್ತದೆ. ಅಲ್ಲದೆ ತತ್ತಿಗಳನ್ನು ಯೋಗ್ಯರೀತಿಯಿಂದ ಸಂಗ್ರಹಿಸಿ ಚೆನ್ನಾಗಿ ಪ್ಯಾಕಿಂಗ (ಗಂಟು ಕಟ್ಟಿ) ಮಾಡಿ ಪರದೇಶಗಳಿಗೆ ಕಳುಹುವ ವ್ಯವಸ್ಥೆಯನ್ನು ಮಾಡುತ್ತದೆ.

ಉತ್ತಮ ಪ್ರಕಾರದ ಕೋಳಿಗಳನ್ನು ಆರಿಸುವಲ್ಲಿ, ಮಾರುವಲ್ಲಿ, ಆದರಿಂದ ಉತ್ತಮ ತತ್ತಿಗಳ ಉತ್ಪತ್ತಿಯಾಗುವಲ್ಲಿ, ಅಲ್ಲದೆ ಉತ್ಪತ್ತಿಯು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುವಲ್ಲಿ ಈ ಕೇಂದ್ರ ಸಂಸ್ಥೆಗಳು ಎಲ್ಲ ಬಗೆಯ ಅವಶ್ಯಕ ಪ್ರಚಾರಕಾರ್ಯವನ್ನು ಕೈಕೊಳ್ಳುವವು. ಈ ಕೇಂದ್ರ ಸಂಸ್ಥೆಗಳೆಲ್ಲವೂ ಕೂಡಿ ಒಂದು ಸಂಸ್ಥೆಯನ್ನು ನಿರ್ಮಿಸಿಕೊಳ್ಳುವವು. ಇಂಥ ಸಂಸ್ಥೆಯು ಪರದೇಶಗಳಿಗೆ ತತ್ತಿಗಳನ್ನು ಕಳುಹುವ ವ್ಯವಹಾರವನ್ನು ಕೈಕೊಳ್ಳುತ್ತದೆ. ೧೯೩೬ ರಲ್ಲಿ ತತ್ತೀಮಾರುವ ಅನೇಕ ಪ್ರಕಾರದ ಸಂಸ್ಥೆಗಳು ಕೂಡಿಕೊಂಡು ರೋಟರಡಾಂಬಿನಲ್ಲಿ ಪ್ರಧಾನಕಚೇರಿಯನ್ನೊಳಗೊಂಡ ತತ್ತೀಮಾರುವ ಒಂದು ಕೇಂದ್ರ ಕಚೇರಿಯನ್ನು ಸ್ಥಾಪಿಸಿಕೊಂಡಿವೆ. ಈ ಕೇಂದ್ರ ಕಚೇರಿಯು ಪರದೇಶಗಳ ಪೇಟೆಗಳ ಪರಿಸ್ಥಿತಿಯನ್ನು ಅಭ್ಯಸಿಸಿ, ಬೇರೆ ಬೇರೆ ಪರದೇಶಗಳಿಗೆ ತತ್ತಿಗಳನ್ನು ಕಳುಹುವ ಶಕ್ಯಾಶಕ್ಯತೆಯ ಬಗೆಗೆ ಸಂಶೋಧಿಸಿ, ಆ ಪ್ರಕಾರ ಕಾರ್ಯತತ್ಪರವಾಗುತ್ತದೆ. ಅಲ್ಲದೆ ದೇಶದಲ್ಲಿಯ ತತ್ತಿಗಳ ಪೂರೈಕೆಯ ಮೇಲೆ ನಿಯಂತ್ರಣ ಹಾಕುವ ಕಾರ್ಯವನ್ನು ಮಾಡುವದು. ಆದುದರಿಂದಲೇ ಇದು ಬೇಡಿಕೆಗೂ ಪೂರೈಕೆಗೂ ಬಾಯಿಗೂಡಿಸುವ ಕಾರ್ಯದಲ್ಲಿ ಸಮರ್ಥವಾಗಿದೆ. ಇದು ಒಳ್ಳೇ ಪ್ರಭಾವ ಶಾಲಿಯಾದ ಸಂಸ್ಥೆಯು. ಇದು ಚಳಿಗಾಲದಲ್ಲಿ ತನ್ನ ಘಟಕವಾದ ಸಂಘಗಳ ಸಲುವಾಗಿ ತತ್ತಿಗಳನ್ನು ತಾನೇ ಖರೀದಿಮಾಡುತ್ತದೆ. ವರ್ಷದ ಉಳಿದ ಕಾಲದಲ್ಲಿ ಇದು ಏಜಂಟನಂತೆ ಕೆಲಸಮಾಡುತ್ತದೆ. ಈ ಮೊದಲೇ ಮೇಲೆ ವಿವರಿಸಿದಂತೆ, ತತ್ತಿಗಳು ಕೈಸೇರಿದ ಒಂದು ವಾರದೊಳಗಾಗಿ ಅವುಗಳ ತಾತ್ಪೂರ್ತಿಕ (Interim) ಬೆಲೆಯನ್ನು ಒಕ್ಕಲಿಗರಿಗೆ ಕೊಡಲಾಗುವದು. ಪೇಟೆಯ ಪರಿಸ್ಥಿತಿ, ತತ್ತಿಯ ಮೂಲಬೆಲೆ, ಈ ಮೊದಲಾದ

ವಿಷಯಗಳನ್ನು ಲಕ್ಷಕ್ಕೆ ತೆಂದುಕೊಂಡು ತಾತ್ಪೂರ್ತಿಕ ಬೆಲೆಯನ್ನು ಗೊತ್ತು
ಪಡಿಸಲಾಗುವದು. ವರ್ಷಾಂತ್ಯದ ಲೆಕ್ಕಪತ್ರಗಳು ತಯಾರಾಗಿ, ವೇಳಗೂ
ಡಿವ ವೇಳೆ, ತತ್ತಿಗಳ ಕಟ್ಟಕಡೆಯ ಬೆಲೆಯನ್ನು ನಿರ್ಧರಿಸಿ, ನಿವಳ
ಲಾಭದೊಳಗಿಂದ ರಿಬೇಟಿನ ರೂಪದಿಂದ ಕೊಡಲಾಗುವದು. ಈ ವೇಳೆಗೆ
ತತ್ತೀಕಳುಹುವ ಸ್ಟೇಶನ್ನು (ಕೂಟ), ಕೇಂದ್ರಸಂಸ್ಥೆ ಮತ್ತು ನ್ಯಾಶನಲ್
ಬ್ಯೂರೋ (ಅಂದರೆ ರಾಷ್ಟ್ರೀಯ ಕೇಂದ್ರ ಕಚೇರಿ) ಇವೆಲ್ಲವುಗಳ ನಡುವೆ
ಹೊಣೆಯು ಹಂಚಲ್ಪಡುವದು. ಯಾವದೇ ಸಂಸ್ಥೆಯು ಹಣದ ಜೋಣೆಯ
ನ್ನಾಗಲೀ ಹಣದ ಹಾನಿಯ ಹೊಣೆಯನ್ನಾಗಲೀ ವಹಿಸುವದಿಲ್ಲ. ಈ
ಪದ್ಧತಿಯಿಂದ ಒಕ್ಕಲಿಗನಿಗೆ ಬಹಳೇ ಲಾಭವುಂಟು. ಇದರಿಂದ ಅವನಿಗೆ
ತತ್ತೀಮಾರಾಟದ ಭರವಸೆಯ ಪೇಟೆ, ಮತ್ತು ಉತ್ತಮ ಬೆಲೆಗಳು ಸಿಗು
ವವಲ್ಲದೆ, ನಡುವಿನ ದಳ್ಳಾಳಿಗಳ ಸುಲಿಗೆಯಿಂದಲೂ ಮುಕ್ತನಾಗುವನು.
ಅವನೇ ತತ್ತಿಗಳ ಉತ್ಪಾದಕನು ! ಅವನೇ ತತ್ತಿಗಳ ಮಾರಾಟಗಾರನು.
ಈ ಬಗೆಯ ಪೇಟೆಯ ಏರ್ಪಾಡು ನಮ್ಮ ಭಾರತದ ಪರಿಸ್ಥಿತಿಗೆ ಹೆಚ್ಚು
ಸರಿ ಹೋಗುವದು ಯೋಗ್ಯಕಂಡ ಬದಲಾವಣೆ ತಿದ್ದುಪಡೆಗಳೊಡನೆ,
ಒಕ್ಕಲುತನದ ಹುಟ್ಟುವಳಿಯನ್ನು ಮಾರಾಟಮಾಡುವ ಈ ಪದ್ಧತಿಯನ್ನು
ಪ್ರಯೋಗಿಸಿ ನೋಡುವದು ವಿಹಿತವೆಂದು ಬೇರೆ ಹೇಳಬೇಕಾಗಿಲ್ಲ.

# ೮ ಇತರ ಪ್ರಕಾರದ ಸಹಕಾರಿ ಸಂಸ್ಥೆಗಳು



**ಚಿಲ್ಲರೆ ವ್ಯಾಪಾರಸ್ಥರ ಸಹಕಾರಿ ಸಂಸ್ಥೆಗಳು:—** ಗಿರಾಕಿಗಳಿಗೆ ಅಥವಾ ಬಳಕೆಗಾರರಿಗೆ ದೈನಂದಿನ ಜೀವನಕ್ಕೆ ಅಗತ್ಯವಿರುವ ಪಡಿ ಪದಾರ್ಥಗಳನ್ನು ಮಾರುವ ಉದ್ದೇಶದಿಂದ ಕೊಳ್ಳಲಿಕ್ಕೂ, ಮತ್ತು ಚಿಕ್ಕ ಚಿಕ್ಕ ವ್ಯಾಪಾರಸ್ಥರಿಗೆ ಆರ್ಥಿಕ ಸಹಾಯವನ್ನು ಒದಗಿಸಲಿಕ್ಕೂ ಚಿಕ್ಕ ಚಿಕ್ಕ ಚಿಲ್ಲರೆ ವ್ಯಾಪಾರಸ್ಥರು ಸಂಘಟಿತರಾಗಿ ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸಿಕೊಂಡಿರುವರು. ಸದಸ್ಯರು ಪಾಲು ಬಂಡವಲಕ್ಕಾಗಿ ( ಶೇಅರು ಬಂಡವಾಳವು ) ವರ್ಗಣಿಯನ್ನು ಕೊಡುವರು. ಹೊಣೆಗಾರಿಕೆಯು ನಿಯಮಿತವಿರುವದು. ಈ ಸಂಸ್ಥೆಗಳು ಬಂಡವಾಳಶಾಹೀ ಬ್ಯಾಂಕು (ಜಾಯಿಂಟ ಸ್ಟಾಕ ಬ್ಯಾಂಕ) ಗಳಿಂದ ಸಾಲ ಪಡೆಯುತ್ತವೆ. ಮತ್ತು ಠೇವುಗಳನ್ನು ಸ್ವೀಕರಿಸುತ್ತವೆ. ನೆದರ್ಲಂಡ್ಸ ಸ್ಮಾಲ್ ರೀಟೇಲರ್ಸ ಬ್ಯಾಂಕು ಅಂದರೆ ನೆದರ್ಲಂಡಿನ ಚಿಲ್ಲರೆ ವ್ಯಾಪಾರಸ್ಥರ ಬ್ಯಾಂಕು ೯೩ ಶಾಖೆಗಳನ್ನು ತೆರೆದು ತನ್ನ ಕಾರ್ಯ ಕ್ಷೇತ್ರದ ವಿಸ್ತಾರವನ್ನು ದೇಶದ ತುಂಬ ಹರಡಿದೆ. ೧೯೪೫-ನೆಯ ವರ್ಷದ ಕೊನೆಗೆ ೨೭೬೦೦೦೦೦೦ ಗಿಲ್ಡರುಗಳ ಠೇವು ಕೂಡಿದ್ದಿತು. ೫೮೦೦೦೦೦೦ ಗಿಲ್ಡರುಗಳ ಹಣವು ವ್ಯಾಪಾರಸ್ಥರಿಂದ ಬರತಕ್ಕದಿದ್ದಿತು. ಈ ಕೇಂದ್ರ ಬ್ಯಾಂಕಿನ ಜೊತೆಗೆ ಈ ದೇಶದಲ್ಲಿ ಸುಮಾರು ೫೦ ಸ್ವತಂತ್ರ ಚಿಲ್ಲರೆ ವ್ಯಾಪಾರಸ್ಥರ ಬ್ಯಾಂಕುಗಳಿವೆ. ಇವು ಹೆಚ್ಚಾಗಿ ಕಮರ್ಸಿಯಲ್ ಬ್ಯಾಂಕುಗಳನ್ನು ಅಂದರೆ ವ್ಯಾಪಾರಸ್ಥರ ಬ್ಯಾಂಕುಗಳನ್ನು ಹೋಲುತ್ತವೆ. ಕಟ್ಟ ಕಡೆಯ ಗಿರಾಕಿಗೆ ಅಥವಾ ಬಳಕೆಗಾರನಿಗೆ ಅಗತ್ಯವಿರುವ ಪಡಿ ಪದಾರ್ಥಗಳನ್ನು ಕೊಂಡು ಪೂರೈಸುವ ಅಥವಾ ಮಾರುವ ದೃಷ್ಟಿಯಿಂದ, ಇಪ್ಪತ್ತನೆಯ ಶತಮಾನದ ಆರಂಭದಿಂದ ಇಂಥ ಸಹಕಾರಿ ಸಂಸ್ಥೆಗಳು ಸ್ಥಾಪಿತವಾಗತೊಡಗಿದವು. ಇವುಗಳಲ್ಲಿ ಕಿರಾಣಿ ಮತ್ತು ಜವಳಿಯ ಸರಕುಗಳನ್ನು ಕೊಳ್ಳತಕ್ಕ ಸಂಸ್ಥೆಗಳೇ ವಿಶೇಷ ಮಹತ್ವದ ಸಂಸ್ಥೆಗಳು ಇಂಥ

ಎಲ್ಲಕ್ಕೂ ದೊಡ್ಡ ಸಂಸ್ಥೆಯೆಂದರೆ ರೋಮನ್ ಕ್ಯಾಥೋಲಿಕ್ ಅಂಗಡಿಕಾರರ ಮತ್ತು ವ್ಯಾಪಾರಸ್ಥರ ಸಹಕಾರಿ ಖರೀದಿ ಸಂಸ್ಥೆಯು ಅಂದರೆ ಕೋಆಪರೇಟಿವ್ಹ ಬಾಯಿಂಗ ಯುನಿಯನ್ನು. ಇದರಲ್ಲಿ ೫೧೦ ಸದಸ್ಯರಿರುವರು. ೫೧೭ ಅಂಗಡಿಗಳಿವೆ. ಮತ್ತು ೧೯೪೭ ರಲ್ಲಿ ೭೩೦೦೦೦೦೦ ಗಿಲ್ಡರುಗಳಷ್ಟು ವ್ಯವಹಾರವಾಯಿತು. ಇಲ್ಲಿಯ ಚಿಲ್ಲರೆ ವ್ಯಾಪಾರಸ್ಥರ ಬ್ಯಾಂಕುಗಳು ಹಿಂದುಸ್ತಾನದಲ್ಲಿಯ ಸಣ್ಣ ನಗರ ಬ್ಯಾಂಕುಗಳನ್ನು ಹೋಲುತ್ತವೆ.

**ಗೃಹ ನಿರ್ಮಾಣ ಸಂಸ್ಥೆಗಳು:**— ಇಲ್ಲಿ ಸುಮಾರು ೧೧೦೦ ಗೃಹ-ನಿರ್ಮಾಣ ಸಂಸ್ಥೆಗಳುಂಟು. ಪ್ರಮುಖವಾಗಿ ಮನೆಗಳ ಬಾಡಿಗೆದಾರರೇ ಈ ಸಂಸ್ಥೆಗಳ ಸದಸ್ಯರಾಗಿರುವರು. ಈ ಸಂಸ್ಥೆಗಳು, ಸರಕಾರದಿಂದ ಸಾಲ ಪಡೆದು, ಮತ್ತು ವಿಮಾ ಕಂಪನಿ, ಒತ್ತೇ ಬ್ಯಾಂಕು, ಮತ್ತು ಟ್ರೇಡ ಯುನಿಯನ್ನುಗಳಿಂದ ಪತ್ತನ್ನು ಪಡೆದು ಮನೆಗಳನ್ನು ಕಟ್ಟುವ ಏರ್ಪಾಡು ಮಾಡುತ್ತವೆ. ಈ ೧೧೦೦ ಸಂಸ್ಥೆಗಳು ಇಲ್ಲಿಯವರೆಗೆ ಸುಮಾರು ೧,೭೦,೦೦೦ ಮನೆಗಳನ್ನು ಕಟ್ಟಿವೆ.

**ಅಂತ್ಯ ಕ್ರಿಯೆಯ ಸಂಸ್ಥೆಗಳು:**— ೫೮೧೦೦೦ ಸದಸ್ಯರನ್ನೊಳಗೊಂಡ ೧೧೧೫ ಅಂತ್ಯ ಕ್ರಿಯೆಯ ಸಂಸ್ಥೆಗಳಿವೆ- ವಾಡಿಕೆಯಾಗಿ ಕುಟುಂಬದ ಮುಖ್ಯಸ್ಥನೇ ಇಂಥ ಸಂಸ್ಥೆಯ ಸಭಾಸದನಿದ್ದು, ಕುಟುಂಬದ ಎಲ್ಲ ಜನರೂ ಈ ಸಂಸ್ಥೆಗಳ ಸೇವೆಯನ್ನು ಲಾಭವನ್ನು ಹೊಂದುವರು. ಈ ಸಂಸ್ಥೆಗಳ ಲಾಭ ಪಡೆದ ಜನರ ಸಂಖ್ಯೆ ಸುಮಾರು ೧೬೬೦೦೦೦ ಇದೆ. ದೇಶದಲ್ಲಿ ಸತ್ತವರ ಸುಮಾರು ಒಂದು ನಾಲ್ಕಾಂಶದಷ್ಟು ಜನರ ವ್ಯವಸ್ಥೆಯನ್ನು ಈ ಸಂಸ್ಥೆಗಳು ಮಾಡುತ್ತವೆ.

**ಅಗ್ನಿ ವಿಮಾ ಸಂಸ್ಥೆಗಳು:**— ಈ ದೇಶದಲ್ಲಿ ೩೦೦೦,೦೦೦ ಸದಸ್ಯರನ್ನೊಳಗೊಂಡ ಸುಮಾರು ೭೫೧ ಪರಸ್ಪರ ಅಗ್ನಿ ವಿಮಾ ಸಂಸ್ಥೆಗಳಿವೆ ಸದಸ್ಯರೆಲ್ಲರೂ ಬಹುತರವಾಗಿ ಒಕ್ಕಲಿಗರಿರವರು. ಹೊಣೆಗಾರಿಕೆಯು ಅನಿಯಮಿತವಾಗಿರುವದು. ಪ್ರಾಥಮಿಕ ಸಂಘಗಳು ತಮ್ಮ ಸಲುವಾಗಿ ಒಂದು ರಾಷ್ಟ್ರೀಯ ಸಂಯುಕ್ತ ಸಂಸ್ಥೆಯನ್ನು ರಚಿಸಿಕೊಂಡಿವೆ; ಇದರ ಜೊತೆಗೆ ದನಗಳ ವಿಮೆ ಇಳಿಸುವ ಸುಮಾರು ೧೯೦೦ ಸಹಾಯಕ ವಿಮಾ ಕಂಪನಿಗ

ಸಿದ್ದು ಇವುಗಳ ಒಟ್ಟು ಸದಸ್ಯರ ಸಂಖ್ಯೆ ೩೦೩೦೦೦ ಇದೆ. ಮತ್ತು ಪುನರ್ವಿಮೆಯಿಳಿಸುವ ಕಂಪನಿಗಳು ೧೩೦ ಇದ್ದು, ಪುನರ್ವಿಮೆ ಇಳಿಸಲ್ಪಟ್ಟ ಬಂಡವಾಳವು ಸುಮಾರು, ೧೯೫೧೯೭೫ ಗಿಲ್ಡರುಗಳಷ್ಟಿದೆ. ಆಣೆಕಲ್ಲು ವಿಮೆ ಇಳಿಸುವ ಕಂಪನಿಗಳೂ ಉಂಟು. ೧೯೫೭ರಲ್ಲಿ ವಿಮೆ ಇಳಿಸಲ್ಪಟ್ಟ ಬಂಡವಾಳವು ೩೩೦೦೦೦೦೦ ಗಿಲ್ಡರುಗಳಷ್ಟಿದ್ದಿತು. ಅಪಾಯದ, ಗಂಡಾಂತರದ, ಹಾನಿಯ ಹೊಣೆಯು, ಪ್ರಾಥಮಿಕ ಸಂಸ್ಥೆಗಳಲ್ಲಿ, ರಾಷ್ಟ್ರೀಯ ಸಂಸ್ಥೆಗಳಲ್ಲಿ ಮತ್ತು ಪುನರ್ವಿಮೆ ಇಳಿಸುವ ಸಂಸ್ಥೆಗಳಲ್ಲಿ ವಿಭಾಗಿಸಲ್ಪಡುವದು. ಹಂಚಲ್ಪಡುವದು. ಈ ಯೋಜನೆಯು ತೀರ ಸುಲಭವಿರುವದು. ಒಕ್ಕಲಿಗರು ಪ್ರತಿ ವರುಷ ಪ್ರಾಥಮಿಕ ವಿಮಾ ಸಂಸ್ಥೆಗಳಿಗೆ ಕೆಲವೊಂದು ಹಣವನ್ನು ವರ್ಗಣಿ ರೂಪವಾಗಿ ಸಲ್ಲಿಸುವರು ಈ ಪ್ರಾಥಮಿಕ ವಿಮಾ ಸಂಸ್ಥೆಗಳು ತಾವು ಒಕ್ಕಲಿಗರಿಂದ ವರ್ಗಣಿರೂಪದಿಂದ ಪಡೆದ ಹಣದಲ್ಲಿ ಕೆಲವೊಂದು ಭಾಗವನ್ನು ಕೇಂದ್ರ ಸಂಸ್ಥೆಗಳಿಗೆ ಸಲ್ಲಿಸುವವು. ಕೇಂದ್ರ ವಿಮಾ ಸಂಸ್ಥೆಗಳು ತಾವು ದೊರಕಿಸಿದ ವರ್ಗಣಿ ಹಣದಲ್ಲಿಯ ಕೆಲವೊಂದು ಭಾಗವನ್ನು ಪುನರ್ವಿಮೆ ಇಳಿಸುವ ಸಂಸ್ಥೆಗಳಿಗೆ ಅವು ಗಂಡಾಂತರದ ಹಾನಿಯ ಹೊಣೆಯನ್ನು ವಹಿಸುವದಕ್ಕಾಗಿ ಕೊಡುವವು.

**ಸಹಕಾರಿ ಕಾಳುಕಡಿಗಳನ್ನು ಒಕ್ಕುವ ಅಥವಾ ತಳಿಸುವ ಮತ್ತು ಯಂತ್ರೋಪಕರಣಗಳ ಸಂಘಗಳು:**— ಈ ಬಗೆಯ ಸಂಘಗಳು ಬಹಳೇ ಜನಪ್ರಿಯವಾಗಿವೆ. ೧೯೫೮ರಲ್ಲಿ ಈ ಪ್ರಕಾರದ ಸಂಘಗಳು ಒಟ್ಟಿಗೆ ೩೩೩ ಇದ್ದವು. ಅವುಗಳಲ್ಲಿ ೧೮೫ ಕಾಳುಕಡಿಗಳನ್ನು ಒಕ್ಕುವ ಅಥವಾ ತಳಿಸುವ ಸಂಘಗಳೂ ೧೦೫ ಯಂತ್ರೋಪಕರಣಗಳ ಸಂಘಗಳೂ ಉಳಿದ ಮೂರು ಇತರ ಪ್ರಕಾರದ ಸಂಘಗಳೂ ಇದ್ದವು. 'ಟ್ರ್ಯಾಕ್ಟರ್' ಬುಲ್ ಡೋಜರು ಈ ಮೊದಲಾದ ದೊಡ್ಡಭೂತವಂತಹ ಯಂತ್ರೋಪಕರಣಗಳನ್ನು ಕೊಳ್ಳುವ ಸಲುವಾಗಿ ಒಕ್ಕಲಿಗರು ಸಂಘಟಿತರಾಗಿ ಸಂಘಗಳನ್ನು ಸ್ಥಾಪಿಸಿಕೊಳ್ಳುವರು. ಆರ್ಥಿಕ ಸಹಾಯವನ್ನೊದಗಿಸುವರು. ಸ್ಥಾನಿಕ ಸಹಕಾರಿ ಸಂಸ್ಥೆಗಳ ಮೇಲೆ ಐದು ಪ್ರಾದೇಶಿಕ ಸಂಯುಕ್ತಸಂಸ್ಥೆಗಳಿವೆ. ಇವೆಲ್ಲವೂ ಕೂಡಿ ಒಂದು ರಾಷ್ಟ್ರೀಯ ಸಂಸ್ಥೆಯನ್ನು ರಚಿಸಿಕೊಂಡಿವೆ.

**ಸಹಕಾರೀ ಅಗಸೇ ಕಾರಖಾನೆಗಳು :**—ಯುರೋಪಖಂಡದಲ್ಲಿ ಸಹಕಾರೀ ಅಗಸೆ ಕಾರಖಾನೆಯೆಂಬದು ಈ ದೇಶದಲ್ಲಿ ಇದೊಂದೇ? ೧೯೫೩-

೪೩ರಲ್ಲಿ ಈ ಕಾರಖಾನೆಯು ಸವಸ್ಸರಿಂದ ೮೦೦೦ ಟನ್ನುಗಳಷ್ಟು ಅಗಸಿ ಕಾಳುಗಳು ಈ ಕಾರಖಾನೆಗೆ ಬಂದವು. ಈ ಅಗಸೆಗಳನ್ನು ಪೂರೈಸಿದ ಸಭಾಸದರಿಗೆ ಒಟ್ಟು ೭,೫೨,೦೦೦ ಗಿಲ್ಡರುಗಳನ್ನು ಕಾರಖಾನೆಯು ಕೊಟ್ಟಿತು.

**ಕೃತ್ರಿಮ ರೀತಿಯಿಂದ ಹುಲ್ಲನ್ನು ಒಣಗಿಸುವ ಸಹಕಾರಿ ಕಾರಖಾನೆಗಳು:**—ಈ ಬಗೆಯ ಕಾರಖಾನೆಗಳೂ ಬಹಳೇ ಜನಪ್ರಿಯವಾಗಿವೆ. ಸುಮಾರು ೫೦ ಸಂಘಗಳಿದ್ದು ಪ್ರತಿಯೊಂದು ಸಂಘದ ಸವಸ್ಯರ ಸರಾಸರಿಯು ೪೦ ಇವೆ! ಒಟ್ಟು ಒಣಗಸಲ್ಪಟ್ಟ ಹುಲ್ಲಿನ ಉತ್ಪಾದನೆಯಲ್ಲಿ ನೂರಕ್ಕೆ ೬೦ ರಷ್ಟು ಸಹಕಾರಿ ಸಂಘಗಳ ಪಾಲು ಇವೆ. ೪೧ ಸಹಕಾರಿ ಸಂಸ್ಥೆಗಳು ಬಿನ್‌ವ್ಯಾಪಾರಿ ಸಂಯುಕ್ತ ಸಂಸ್ಥೆಯೊಂದನ್ನು ರಚಿಸಿಕೊಂಡಿವೆ.

**ಸಹಕಾರಿ ರಟ್ಟಿನ (ಸ್ಟ್ರಾ ಬೋರ್ಡ್) ಕಾರಖಾನೆಯು:**—ಇಂಥ ಕಾರಖಾನೆಗಳು ಈ ದೇಶದಲ್ಲಿ ೧೯ ಇದ್ದು ಪ್ರತಿವರುಷ ೩೪೦೦೦೦ ಟನ್ನುಗಳಷ್ಟು ರಟ್ಟುಗಳನ್ನು ತಯಾರಿಸುತ್ತವೆ.

**‘ ಬೀಟ ’ ಗಡ್ಡೆಯಿಂದ ಸಕ್ಕರೆ ತಯಾರಿಸುವ ಸಹಕಾರಿ ಕಾರಖಾನೆಗಳು:**–ನೆದರ್ಲಾಂಡಿನಲ್ಲಿ ಹುಟ್ಟುವ ಒಟ್ಟು ಸಕ್ಕರೆಯಲ್ಲಿ ನೂರಕ್ಕೆ ಅರವತ್ತರಷ್ಟು ಪ್ರಮಾಣದಲ್ಲಿ ಬೀಟಗಡ್ಡೆಯ ಸಕ್ಕರೆಯನ್ನು ಸಹಕಾರಿ ಕಾರಖಾನೆಗಳು ತಯಾರಿಸುತ್ತವೆ. ಈ ಸಂಘಗಳ ಅಂದರೆ ಕಾರಖಾನೆಗಳ ಸಭಾಸದರು ಒಕ್ಕಲಿಗರಿರುವರು. ಹೊಣೆಗಾರಿಕೆಯು ಪರಿಮಿತವಿರುವದು. ಸಭಾಸದರಾದವರು ಶೇಅರು (ಪಾಲು) ಗಳನ್ನು ಕೊಳ್ಳಬೇಕಾಗುವದು. ಬೀಟಗಡ್ಡೆಗಳನ್ನು ಪೂರೈಸುವ ಪ್ರಮಾಣದ ಮೇಲೆ ಶೇಅರುಗಳನ್ನು ಅಂದರೆ ಪಾಲುಗಳನ್ನು ಧಾರಣಮಾಡಬೇಕಾಗುತ್ತದೆ. ಒಕ್ಕಲಿಗನು ಹೆಚ್ಚು ಶೇಅರುಗಳನ್ನು ಧಾರಣಮಾಡಬೇಕೆಂದು ಉದ್ದೇಶಿಸಿದರೆ, ಕಾರಖಾನೆಗಳಿಗೆ ಅವರು ಆ ಪ್ರಮಾಣದಲ್ಲಿ ಹೆಚ್ಚು ಬೀಟಗಡ್ಡೆಗಳನ್ನು ಮಾರಬೇಕಾಗುವದು. ಈ ಮೇರೆಗೆ ಬೀಟಗಡ್ಡೆಗಳನ್ನು ಕಾರಖಾನೆಗಳಿಗೆ ಮಾರುವದಕ್ಕೂ ಒಕ್ಕಲಿಗನು ಶೇಅರುಗಳನ್ನು ಧಾರಣಮಾಡುವದಕ್ಕೂ ಒಂದು ಕರಾರು ಒಂದು ನಿಕಟ ಸಂಬಂಧ ವಿರುವದೆಂತಂತಾಯಿತು. ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ ವ್ಯವಸ್ಥಾಪಕ ಮಂಡ

ಲವೇ ಕಾರಖಾನೆಯ ಎಲ್ಲ ಆಡಳಿತೆಯನ್ನು ನೋಡಿಕೊಳ್ಳುವದು ಮಡಿವಂ ಗಾರರು ವ್ಯವಸ್ಥಾಪಕ ಮಂಡಲದಲ್ಲಿ ತಮ್ಮ ಪರವಾಗಿ ಪ್ರತಿನಿಧಿಗಳನ್ನು ಕಳಿಸಲಿಕ್ಕೆ ಬರುವದು ಒಕ್ಕಲಿಗನು ಕಾರಖಾನೆಗೆ ಬೀಟಗಡ್ಡೆಗಳನ್ನು ಪೂರೈಸಿದ ನಂತರ ಅವನಿಗೆ ತಾತ್ಕಾಲಿಕ ಬೆಲೆಯನ್ನು ಕೊಡಲಾಗುವದು. ಒಕ್ಕಲಿಗನು ಪೂರೈಸಿದ ಬೀಟಗಡ್ಡೆಗಳ ಪ್ರಮಾಣ ಮತ್ತು ತರಗತಿಯ ಮೇಲಿಂದ ಅವುಗಳ ಬೆಲೆಯನ್ನು ವರ್ಷಾಂತ್ಯಕ್ಕೆ ಗೊತ್ತುಪಡಿಸಲಾಗುವದು. ಮತ್ತು ನಿವಳಲಾಭವನ್ನು ಒಕ್ಕಲಿಗರ ಮತ್ತು ಕೂಲಿಕಾರರ ನಡುವೆ ಹಂಚಲಾಗುವದು. ಕೂಲಿಕಾರರಲ್ಲಿ ಅವರವರ ಕರ್ತೃತ್ವಶಕ್ತಿ, ಯೋಗ್ಯತೆಗಳ ಪ್ರಕಾರ ಆರು ವರ್ಗಗಳನ್ನು ಮಾಡುವರು. ಯಾರು ಹೆಚ್ಚು ಪರಿಶ್ರಮ ಪಟ್ಟು, ಹೆಚ್ಚು ದುಡಿಮೆ ತೋರಿಸುವರೋ ಯಾರಲ್ಲಿ ಕರ್ತೃತ್ವಶಕ್ತಿ ಹೆಚ್ಚಿಗಿರುವದೋ ಅಂಥವರಿಗೆ ಆ ಪ್ರಮಾಣದಲ್ಲಿ ಹೆಚ್ಚು ಬೋನಸ್ಸು ಅಥವಾ ಸಂಭಾವನೆಯನ್ನು ಕೊಡಲಾಗುವದು. ಈ ಮೇರೆಗೆ ದುಡಿಮೆ ಮತ್ತು ಬಂಡವಾಳದ ನಡುವೆ ಒಂದು ಸ್ನೇಹದ ಮೇಳವುಂಟಾಗುವದು. ಇದರಿಂದ ಒಕ್ಕಲಿಗರು ಸುಲಿಗೆಯಿಂದ ದೂರ ಉಳಿಯುವರು ಮತ್ತು ತಮ್ಮ ಹುಟ್ಟುವಳಿಗೆ ಯೋಗ್ಯ ಬೆಲೆಯನ್ನು ಪಡೆಯುವರು. ಅಲ್ಲದೆ ಪೇಟೆಯಲ್ಲಿ ಬರುವ ಹುಟ್ಟುವಳಿಯ ಮೇಲೆಯೂ ನಿಯಂತ್ರಣವುಳಿಯುವದು. ಆಡಳಿತೆಗೂ ಮತ್ತಿತರ ವಿಷಯಗಳಿಗೂ ಸಂಬಂಧಪಟ್ಟ ಸರ್ವಸಾಧಾರಣ ಪ್ರಶ್ನೆಗಳನ್ನು ವಿಚಾರ ಮಾಡಲಿಕ್ಕೆ ಆರು ಸಹಕಾರಿ ಸಂಸ್ಥೆಗಳು ಸಂಘಟಿತವಾಗಿ ಒಂದು ರಾಷ್ಟ್ರೀಯ ಸಂಸ್ಥೆಯನ್ನು ಕಟ್ಟಿಕೊಂಡಿವೆ.

**ಸಹಕಾರಿ ಆಲೂಗಡ್ಡೆಯ ಹಿಟ್ಟಿನ ಕಾರಖಾನೆಗಳು:—** ಇಂಥ ಹದಿನೈದು ಸಹಕಾರಿ ಕಾರಖಾನೆಗಳಿವೆ, ಮತ್ತು ನಾಲ್ಕು ಖಾಸಗೀ ರೀತಿಯಿಂದ ನಡೆಯಿಸಲ್ಪಟ್ಟಿವೆ. ಈ ಉದ್ಯೋಗದಲ್ಲಿ ಸಹಕಾರದ ಪಾಲು ನೂರಕ್ಕೆ ೯೦ ರಷ್ಟು ಇದೆ. ಹದಿನೈದು ಸಹಕಾರಿ ಕಾರಖಾನೆಗಳಲ್ಲಿ ಹನ್ನೆರಡು ಕೂಡಿಕೊಂಡು, ತಮ್ಮ ಹುಟ್ಟುವಳಿಯ ಮಾರಾಟಕ್ಕಾಗಿ ಒಂದು ಕೇಂದ್ರ ವ್ಯಾಪಾರಿ ಸಂಸ್ಥೆಯನ್ನು ರಚಿಸಿಕೊಂಡಿವೆ.

**'ಕಸಾಯಿ' ಅಥವಾ ಕಟಿಕರ ಅಂಗಡಿಗಳು:—** ನೆದರ್ಲಂಡಿನಲ್ಲಿ ಮುಖ್ಯವಾಗಿ ದನಕರುಗಳನ್ನು ಹಾಲು ಹೈನದ ಸಲುವಾಗಿ ಸಾಕುತ್ತಿದ್ದರು. ದನಗಳನ್ನು ದನಗಳ ಮಾಂಸ ಮತ್ತು ಮಾಂಸದಿಂದ ತಯಾರಾಗುವ

ಪದಾರ್ಥಗಳನ್ನು ಮಾರುವದು ಒಂದು ಮಹತ್ವದ ವಿಷಯವಾಗಿದೆ. ಪರದೇಶಗಳಿಗೆ ಗೋಮಾಂಸವು ದೊಡ್ಡ ಪ್ರಮಾಣದಲ್ಲಿ ಕಳಿಸಲ್ಪಡುತ್ತಿರುವದು. ಸಹಕಾರಿ ಕಟುಕರ ಅಂಗಡಿಗಳೂ ದನಕರಗಳ ಮಾರಾಟದ ಸಂಸ್ಥೆಗಳೂ ಸ್ಥಾಪಿತವಾಗಿದ್ದು ಉತ್ತಮ ರೀತಿಯಿಂದ ಕಾರ್ಯಪ್ರವೃತ್ತವಾಗಿವೆ. ಒಕ್ಕಲಿಗರು ಈ ಸಂಸ್ಥೆಗಳ ಸಭಾಸದರಿರುವರು. ಮತ್ತು ಈ ಸಂಸ್ಥೆಗಳ ಶೇರುಗಳನ್ನು (ಪಾಲುಗಳನ್ನು) ಧಾರಣಮಾಡಿರುವರು. ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಆರಿಸಲ್ಪಟ್ಟ ವ್ಯವಸ್ಥಾಪಕ ಸಮಿತಿಯು ಸಂಘಗಳ ಆಡಳಿತೆಯನ್ನು ನೋಡಿಕೊಳ್ಳುವದು. ಒಕ್ಕಲಿಗನು ಕಟುಕರ ಅಂಗಡಿಗೆ ಮಾರಬೇಕೆಂದಿರುವ ಹಂದಿಗಳು ಅಥವಾ ದನಕರುಗಳು ಎಷ್ಟಿರುವವೆಂಬುದನ್ನು ಸಂಘದ ಮ್ಯಾನೇಜರನಿಗೆ ಅಥವಾ ವ್ಯವಸ್ಥಾಪಕನಿಗೆ ತಿಳಿಸುವನು. ಕೂಡಲೇ ಸಂಘವು ಅವನ ಕಡೆಗೆ ಒಂದು ಚಕ್ಕಡಿ(ವ್ಯಾನ್)ಯನ್ನು ಕಳಹುವದು. ಆ ಚಕ್ಕಡಿ ಅಥವಾ ಬಂಡಿಯಲ್ಲಿ ಒಕ್ಕಲಿಗನು ತನ್ನ ಎಲ್ಲ ಹಂದಿ ಮತ್ತು ದನಕರುಗಳನ್ನು ಹೇರಿ ಕಳಿಸಿಕೊಡುವನು. ನಂತರ ಆ ಹಂದಿಗಳನ್ನೂ ದನಕರುಗಳನ್ನು ತೂಕಮಾಡಿ ಕೊಲ್ಲುವರು ಅರ್ಥಾತ್ ಕಡಿಯುವರು. ಮಾಂಸದ ತೂಕ ಮತ್ತು ತರಗತಿಯ ಮೇಲೆ ಅದರ ಬೆಲೆಯನ್ನು ಗೊತ್ತುಪಡಿಸಲಾಗುವದು. ಮತ್ತು ಆ ಬೆಲೆಯ ಹಣವನ್ನು ಆ ಒಕ್ಕಲಿಗನ ಖಾತೆಗೆ ಜಮೆಮಾಡಿ ನಂತರ ಅವನಿಗೆ ನಗದು ಹಣದ ರೂಪದಲ್ಲಾಗಲೀ ಅಥವಾ ಆ ಒಕ್ಕಲಿಗನು ಸದಸ್ಯನಿರುವ ಸ್ಥಾನಿಕ ಬ್ಯಾಂಕಿನ ಮುಖಾಂತರವಾಗಲಿ ಕೊಡಲಾಗುವದು. ಆಕಳುಗಳು ಮುಪ್ಪಾದ ಮೇಲೆ, ಅವುಗಳನ್ನು ಚನ್ನಾಗಿ ಮೇಯಿಸಿ ಕೊಬ್ಬಿಸಿ ನಂತರ ಕಟುಕರ ಅಂಗಡಿಗೆ ಮಾರಲಾಗುವದು. ಸಹಕಾರಿ ಸಂಸ್ಥೆಗಳೂ ಇಂಥ ಆಕಳುಗಳನ್ನು ಯೋಗ್ಯಲಾಭ ಬರುವಂತೆ ಮಾರಾಟಮಾಡುವ ವ್ಯವಸ್ಥೆಮಾಡುತ್ತವೆ. ಸಹಕಾರದ ಈ ಶಾಖೆಯು ಇತ್ತೀಚಿಗೆ ಸ್ಥಾಪಿತವಾಗಿದ್ದರೂ ಬಹಳೇ ಪ್ರಗತಿಯನ್ನು ಸಾಧಿಸಿದೆ. ಇಂಥ ಸಹಕಾರಿ ಸಂಸ್ಥೆಗಳ ಒಟ್ಟು ಸಭಾಸದರ ಸಂಖ್ಯೆ ೪೦,೦೦೦ ಇದೆ. ರಾಟರ್‌ಡ್ಯಾಮಿನಲ್ಲಿರುವ ಕೇಂದ್ರ ಸಹಕಾರಿ ಸಂಸ್ಥೆಯು ಐದು ಸ್ಥಳಗಳಲ್ಲಿ ಸಹಕಾರಿ ಕಟುಕರ ಅಂಗಡಿಗಳನ್ನು ತೆರೆದಿವೆ. ಎಲ್ಲ ಸಹಕಾರಿ ಕಟುಕರ ಅಂಗಡಿಗಳೂ ಮತ್ತು ದನಕರುಗಳನ್ನು ಮಾರುವ ಸಹಕಾರಿ ಸಂಸ್ಥೆಗಳೂ ರಾಟರ್‌ಡ್ಯಾಮಿನಲ್ಲಿ, ಒಂದು ಜಿನ್‌ವ್ಯಾಪಾರೀ ಸಂಯುಕ್ತ ಸಂಸ್ಥೆಯನ್ನು ಸ್ಥಾಪಿಸಿವೆ. ಹಂದೀಮಾಂಸದ ಉತ್ಪಾದನೆಯಲ್ಲಿ ಸಹಕಾರದ ಪಾಲು ನೂರಕ್ಕೆ ೪೦ ರಷ್ಟು ಇದೆ.

**ಸಹಕಾರಿ ಗ್ರಾಹಕ ಸಂಘಗಳು:**–ಸುಮಾರು ೩೦೦೦೦೦ ಸದಸ್ಯರನ್ನೊಳಗೊಂಡ ಅಥವಾ ದೇಶದ ಒಟ್ಟು ಜನಸಂಖ್ಯೆಯಲ್ಲಿ ನೂರಕ್ಕೆ ೧೩ ರಷ್ಟು ಜನರನ್ನೊಳಗೊಂಡ ೩೦೮ ಗ್ರಾಹಕ ಸಂಘಗಳು ಈ ದೇಶದಲ್ಲಿವೆ. ಈ ಎಲ್ಲ ಸಂಘಗಳ ಒಟ್ಟು ವ್ಯವಹಾರವು ೭೦೦೦೦೦೦೦ ಗಿಲ್ಡರುಗಳಷ್ಟು (೮೭,೫೦,೦೦೦೦ ರೂಪಾಯಿ)ಆಗಿದೆ. ಈ ಗ್ರಾಹಕ ಸಂಘಗಳು ಕಿರಾಣಿಯ ಸಾಮಾನು, ಮಾಂಸ, ಜವಳಿ, ಕಡಾವಿಗೆ, ಪಾದತ್ರಾಣ, ಮನೆತನಕ್ಕೆ ಅವಶ್ಯಕವಾದ ಸಾಮಾನು ಕಟ್ಟಿಗೆಯ ಸಾಮಾನು, ತಂಬಾಕು ಮತ್ತಿತರ ಸಾಮಾನುಗಳನ್ನು ಪೂರೈಸುತ್ತವೆ! ಕೆಲವೊಂದು ಗ್ರಾಹಕಸಂಘಗಳು 'ಬೇಕರಿ' ಗಳನ್ನು (ಅಂದರೆ ಬ್ರೆಡ್ಡು ಅಥವಾ ರೊಟ್ಟಿಗಳನ್ನು ತಯಾರಿಸುವ ಕಾರಖಾನೆಗಳನ್ನು ) ಒಳ್ಳೇ ಉತ್ತಮ ರೀತಿಯಿಂದ ನಡೆಯಿಸುತ್ತವೆ! ಈ ಚಳವಳಿಯು ಸಾಕಷ್ಟು ಮುಂದುವರಿದಿದ್ದರೂ ಇವುಗಳಿಗೆ ಸಾಲ ಪೂರೈಸುವ ಕೇಂದ್ರ ಬ್ಯಾಂಕುಗಳ ಅಭಾವವು ಎದ್ದು ಕಾಣುವದು. ಈ ಸಂಘಗಳು ಬಂಡವಾಳ ಶಾಹಿ ಬ್ಯಾಂಕುಗಳಿಂದ ಸಾಲಪಡೆಯುತ್ತವೆ. ಗ್ರೇಟ ಬ್ರಿಟನ್ನಿನಲ್ಲಿ ಮನುಷ್ಯನ ಜನ್ಮದಿಂದ ಮರಣದ ವರೆಗೂ ಅಗತ್ಯವಿರುವ ಎಲ್ಲ ಸಾಮಾನುಗಳನ್ನು ಗ್ರಾಹಕ ಸಂಘಗಳು ಪೂರೈಸುವ ವ್ಯವಸ್ಥೆ ಮಾಡುತ್ತಿದ್ದರೆ ಇಲ್ಲಿಯ ಗ್ರಾಹಕಸಂಘಗಳು ಮನುಷ್ಯನ ಅಥವಾ ಗ್ರಾಹಕನ ಮರ್ಯಾದಿತ ಅಡಚಣಿಗಳನ್ನು ಪೂರೈಸುತ್ತವೆ! ಡೆನ್ಮಾರ್ಕದಲ್ಲಿ ಹಳ್ಳಿಗಳ ಕ್ಷೇತ್ರದಲ್ಲಿಯೂ ಗ್ರಾಹಕ ಸಂಘಗಳು ಕಂಡು ಬರುತ್ತಿದ್ದರೆ, ಇಲ್ಲಿ ಮಾತ್ರ ಪಟ್ಟಣಗಳಲ್ಲಿ ಅವು ಇರುವವು. ಖಾಸಗಿ ವ್ಯಾಪಾರಸ್ಥರು ಬಹುತರವಾಗಿ ಒಕ್ಕಲಿಗನ ಮನೆತನದ ಅಡಚಣಿಗಳನ್ನು ಪೂರೈಸಿಕೊಡುವರು. ರಾಟರ್‌ಡ್ಯಾಮಿನಲ್ಲಿ ಸ್ಥಾನಿಕ ಸಹಕಾರಿ ಸಂಸ್ಥೆಗಳ ಪರವಾಗಿ ಒಂದು ಸೆಂಟ್ರಲ್ ಹೋಲಸೇಲ ಆ್ಯಂಡ ಮ್ಯಾನ್ಯುಫ್ಯಾಕ್ಚರಿಂಗ ಆರ್ಗನಾಯಝೇಶನ್ ಅಂದರೆ ಕೇಂದ್ರ ಥೋಕ ಮಾರುವ ಮತ್ತು ಪಶುಗಳನ್ನು ತಯಾರಿಸುವ ಸಂಸ್ಥೆಯು ಸ್ಥಾಪಿತವಾಗಿದೆ. ಆದರೆ ಅದಕ್ಕೆ ಇನ್ನೂ ಪರಿಪೂರ್ಣತೆಯು ಪ್ರಾಪ್ತವಾಗಿಲ್ಲ. ಗ್ರಾಹಕ ಚಳವಳಿಯ ಪ್ರಕಟನಾಶಾಖೆಯವತಿಯಿಂದ ಗ್ರಾಹಕ ಸಂಘಗಳ ಸದಸ್ಯರಾಗುವ ಬಗ್ಗೆ ಜನರಿಗೆ ಉತ್ತೇಜನ ಕೊಡಲಿಕ್ಕೂ, ಉಪದೇಶಮಾಡಲಿಕ್ಕೂ ಹೆಚ್ಚು ಪ್ರಚಾರಕಾರ್ಯ ನಡೆದಿರುವದು. ಪ್ರಕಟನೆಗಳು ಹೊರಡುತ್ತವೆ. ಈ ಪ್ರಯತ್ನದ ಫಲವಾಗಿ ಈ ಚಳವಳಿಯು ಜನಪ್ರಿಯವಾಗಹತ್ತಿದೆ. ಜನತೆಯಲ್ಲಿ ಇದರ ಬಗೆಗೆ ಈಗ ಕುತೂಹಲವೂ ಆಸಕ್ತಿಯೂ ಕಂಡು ಬರುತ್ತಿವೆ.

**ನ್ಯಾಶನಲ್ ಕೋಆಪರೇಟಿವ್ಹ ಕೌನ್ಸಿಲ್:—** (ರಾಷ್ಟ್ರೀಯ ಸಹಕಾರಿ ನ್ಯಾಯ ಸಭೆ) ಹಾಲಂಡದಲ್ಲಿ ಹೇಗ ಪಟ್ಟಣದಲ್ಲಿ ಸ್ಥಾಪಿತವಾದ ನ್ಯಾಶನಲ್ ಕೋಆಪರೇಟಿವ್ಹ ಹೆಡ್ ಎಂದು ಕರೆಯಲ್ಪಡುತ್ತಿರುವ ರಾಷ್ಟ್ರೀಯ ಸಹಕಾರಿ ನ್ಯಾಯಮಂಡಲವೊಂದಿದೆ. ಕೆಳಗಿನ ೧೦ ರಾಷ್ಟ್ರೀಯ ಸಹಕಾರಿ ಸಂಸ್ಥೆಗಳು ಅದರ ಸದಸ್ಯತ್ವವನ್ನು ಪಡೆದಿವೆ.

೧) ನ್ಯಾಶನಲ್ ಕೋಆಪರೇಟಿವ್ಹ ಪರ್ಚೇಜಿಂಗ ಅ್ಯಾಂಡ ಸೆಲಿಂಗ ಸೊಸಾಯಟಿ ಫಾರ್ ಅಗ್ರಿಕಲ್ಚರ ರಾಟರಡ್ಯಾಮ್.

೨) ಕೋಆಪರೇಟಿವ್ಹ ಸೆಂಟ್ರಲ್ ಪರ್ಚೇಜಿಂಗ ಅ್ಯಾಂಡ ಸೆಲಿಂಗ ಸೊಸಾಯಟಿ ಫಾರ್ ರಿಜನಲ್ ಪರ್ಚೇಜಿಂಗ ಅ್ಯಾಂಡ ಸೆಲಿಂಗ ಸೊಸಾಯಟೀಜ(೪) ರಾಟರ್ ಡ್ಯಾಮ.

೩) ಕೋಆಪರೇಟಿವ್ಹ ಸೆಂಟ್ರಲ್ ಆರ್ಗನಾಯಝೇಶನ್ ಫಾರ್ ಮಾರ್ಕೇಟಿಂಗ ಅ್ಯಾಂಡ ಪ್ರೊಸೆಸಿಂಗ ಆಫ್ ಕ್ಯಾಟಲ್ ರಾಟರ್‌ಡ್ಯಾಮ.

೪) ಫೇಡರೇಶನ್ ಫಾರ್ ದಿ ಮಾರ್ಕೇಟಿಂಗ ಆಫ್ ಕ್ಯಾಟಲ್ ಆಫ್ ದಿ ಕ್ಯಾಥೋಲಿಕ್ ನೆದರ್ಲ್ಯಾಂಡ್ಸ ಫಾರ್ಮರ್ಸ ಅ್ಯಾಂಡ ಹಾರ್ಟಿಕಲ್ಚರ್ಸ ಆರ್ಗನಾಯಝೇಶನ್ ಬಾಕ್ಸಟೆಲ್.

೫) ಸೆಂಟ್ರಲ್ ಆರ್ಗನಾಯಝೇಶನ್ ಆಫ ದಿ ನೆದರ್ಲ್ಯಾಂಡ್ಸ ಕಂಜ್ಯೂಮರ್ಸ ಕೋ-ಆಪರೇಟಿವ್ಹಜ, ರಾಟರಡ್ಯಾಮ.

೬) ಫರ್ಸ್ಟ ನೆದರ್ಲ್ಯಾಂಡ್ಸ ಕೋ-ಆಪರೇಟಿವ್ಹ ಫ್ಯಾಕ್ಟರಿ ಫಾರ್ ಆರ್ಟಿಫಿಸಿಯಲ್ ಫರ್ಟಿಲಾಯಿಝರ್ಸ ವ್ಲಾರ್‌ಡಿಂಜನ್.

೭) ರಾಯಲ್ ನೆದರ್ಲ್ಯಾಂಡ್ಸ ಡೇಅರಿ ಯುನಿಯನ್, ಡೆನ್‌ಹಾಗ್

೮) ಫೇಡರೇಶನ್ ಆಫ್ ಮ್ಯೂಚ್ಯುಅಲ್ ಫಾಯರ್ ಇನ್ಸುರನ್ಸ ಕಂಪನೀಜ, ಡೆನ್ ಹಾಗ್.

೯) ಸೆಂಟ್ರಲ್ ಬ್ಯೂರೋ ಆಫ್ ಹಾರ್ಟಿಕಲ್ಚರಲ್ ಅಕ್ಷನ್ಸ ಇನ್ ದಿ ನೆದರ್ಲ್ಯಾಂಡ್ಸ, ಡೆನ್ ಹಾಗ್.

೧೦) ಫೇಡರೇಶನ್ ಆಫ್ ಅಗ್ರಿಕಲ್ಚರಲ್ ಅ್ಯಾಂಡ ಹಾರ್ಟಿಕಲ್ಚರಲ್ ಮಶೀನರಿ ಸೊಸಾಯಟೀಜ, ಅಲ್‌ಮೆನ್.

೧೧) ಕೋ-ಆಪರೇಟಿವ್ಹ ನೆದರ್ಲಂಡ್ಸ ವೂಲ ಮಾರ್ಕೇಟಿಂಗ ಸೊಸಾಯಟಿ ಬರ್ಗೆನ್.

೧೨) ಫೇಡರೇಶನ್ ಆಫ್ ಕೋ-ಆಪರೇಟಿವ್ಹ ಬೀಟ ಶ್ಯುಗರ ಫ್ಯಾಕ್ಟರೀಜ ಬರ್ಗೆನ್ ಅಥವಾ ಝೂಮಾ.

೧೩) ಸೆಂಟ್ರಲ್ ಆರ್ಗನಾಯಝೇಶನ್ ಆಫ ಕೋ-ಆಪರೇಟಿವ್ಹ ಮಾರ್ಕೆಟಿಂಗ ಆರ್ಗನಾಯಝೇಶನ್ಸ್ ಫಾರ್ ಸೀಡ್ಸ ಆ್ಯಂಡ ಪೊಟ್ಯಾಟೋಜ ಇನ್ ದಿ ನೆದರ್ಲಂಡ್ಸ ಗ್ರೋನಿಂಜೆನ್.

೧೪) ಸೆಂಟ್ರಲ್ ಕೋ-ಆಪರೇಟಿವ್ಹ ಮಾರ್ಕೆಟಿಂಗ ಸೊಸಾಯಟಿ ಫಾರ್ ಎಗ್ಜ ರೋಅರಮಂಡ

೧೫) ಕೋ-ಆಪರೇಟಿವ್ಹ ಪೊಟ್ಯಾಟೋ ಫ್ಲೋಅರ ಸಿಲಿಂಗ ಬ್ಯುರೋ ಆಫ್ ಯುನಾಯಿಟೆಡ್ ಫಾರ್ಮರ್ಸ ಫ್ಯಾಕ್ಟರೀಜ, ವೀನ್ ಡ್ಯಾಮ್

೧೬) ಕೋ-ಆಪರೇಟಿವ್ಹ ಸೆಂಟ್ರಲ್ ರೈಫೀಜನ್ ಬ್ಯಾಂಕ, ಯುಟ್ರೆಜೆಟ್

೧೭) ಕೋ-ಆಪರೇಟಿವ್ಹ ಸೆಂಟ್ರಲ್ ಫಾರ್ಮರ್ಸ ಕ್ರೆಡಿಟ್ ಬ್ಯಾಂಕ ಐಂಡೋವ್ಹೆನ್

೧೮) ಕೋ-ಆಪರೇಟಿವ್ಹ ಫ್ಲ್ಯಾಕ್ಸ ಫ್ಯಾಕ್ಟರಿ "ಡಿಂಟೆಲೂರ್ಡ" ಸ್ಟೀನ್‌ಬರ್ಗೆನ್.

೧೯) ಮ್ಯುಚುಅಲ್ ಫಾರ್ಮರ್ಸ ಇನ್ಸ್ಯುಅರನ್ಸ ಸೊಸಾಯಟಿ (ಲಾಯಿಫ ಇನ್‌ಶ್ಯುಅರನ್ಸ) ಲೀಯೂ ವಾರ್ಡನ್.

೨೦) ಫೇಡರೇಶನ್ ಆಫ್ ಕೋ-ಆಪರೇಟಿವ್ಹ ಮಾರ್ಕೆಟಿಂಗ ಫಾರ ಡೇಅರಿ ಪ್ರೊಡಕ್ಟ್ಸ ಹೇಗ.

ನೆದರ್ಲಂಡಿನಲ್ಲಿಯ ಎಲ್ಲ ಸಹಕಾರಾಂದೋಲನದ ಪ್ರತಿನಿಧಿಕ ಘಟಕವಾಗಿದೆ. ಇದು ಈ ಸಹಕಾರಿ ನ್ಯಾಯಮಂಡಲದ ಉದ್ದೇಶಗಳು ಕೆಳಗಿನಂತಿವೆ.

ಸಹಕಾರ ವಿಚಾರಗಳ ಪ್ರಸಾರಣೆ ಮತ್ತು ಸಂರಕ್ಷಣೆ, ಸಹಕಾರ ಚಳುವಳಿಯ ಸಮರ್ಥನೆ, ಸಂವರ್ಧನೆ, ಮತ್ತು ಸಂರಕ್ಷಣೆ, ಸಹ-

ಕಾರ ಚಳುವಳಿಯ ಸ್ವತಂತ್ರ ಅಸ್ತಿತ್ವ ಮತ್ತು ಸ್ವತಂತ್ರ ಪ್ರಗತಿಗಳಿಗೋಸು ಗವಾಗಿ ಇರತಕ್ಕ ಹಕ್ಕಿನ ಸಂರಕ್ಷಣೆ, ಈ ಹಕ್ಕು ಈ ಪ್ರಗತಿಗಳಿಗೆ ತಡೆ ಹಾಕುವ, ಅಡ್ಡ ಬರುವ ಎಲ್ಲ ಪ್ರಯತ್ನಗಳಿಗೂ ಪ್ರತಿರೋಧ ವಿರೋಧ !

ಈ ರಾಷ್ಟ್ರೀಯ ಸಹಕಾರೀ ನ್ಯಾಯ ಸಭೆಯು ಒಂದು ಮಾಸಪತ್ರಿಕೆ ಯನ್ನು ಹೊರಡಿಸುತ್ತದೆ. ಇದರಲ್ಲಿ ಪ್ರಚಲಿತ ಸಹಕಾರದ ವಿಷಯಕ್ಕೆ ಸಂಬಂಧಿಸಿದ ಪ್ರಶ್ನೆಗಳೂ ಸಮಸ್ಯೆಗಳೂ ಮತ್ತು ಸಹಕಾರಿ ಸಂಘಗಳ ವಿವಿಧ ಶಾಖೆಗಳ ವಿಷಯಕ್ಕೆ ಸಂಬಂಧಿಸಿದ ಲೇಖಗಳೂ ಇರುವವು ಸಹ-ಕಾರ ಚಳುವಳಿಯ ವಿವಿಧ ಕೋನಗಳನ್ನೊಳಗೊಂಡ, ವಿಶೇಷವಾಗಿ ಸಹ-ಕಾರಿ ಸಂಸ್ಥೆಗಳಲ್ಲಿ ಕೆಲಸ ಮಾಡುವ ನೌಕರ ವರ್ಗಕ್ಕೆ ಮತ್ತು ಸಹಕಾರ ಖಾತೆಯಲ್ಲಿ ದುಡಿಯುವ ಸಹಕಾರಿ ನೌಕರ ವರ್ಗಕ್ಕೆ ಸಂಬಂಧಿಸಿದ ವಿಷ ಯುಗಳನ್ನೊಳಗೊಂಡ ಎಲ್ಲ ಮಾಹಿತಿಯನ್ನು ಈ ಪತ್ರಿಕೆಯು ಪೂರೈಸುವದು.

ಕೊನೆಯದಾಗಿ ಈ ರಾಷ್ಟ್ರೀಯ ಸಹಕಾರ ನ್ಯಾಯ ಮಂಡಲವು ಉಚ್ಚ ಶಿಕ್ಷಣ ಪಟುಗಳೊಡನೆ ವಿಶೇಷ ಸಂಬಂಧವನ್ನಿಟ್ಟುಕೊಂಡಿರುವದು. ( ಈ ನ್ಯಾಯಮಂಡಳದ ) ಮತ್ತಿದರ ದಿಗ್ದರ್ಶಕನು (ಡಾಯರೆಕ್ಟರನು) ಆಮ್‌ಸ್ಟರ್ಡಮ್ ವಿಶ್ವವಿದ್ಯಾಲಯದಲ್ಲಿ, ನೇಮದಿಂದ ಸಹಕಾರ ಚಳುವ ಳಿಯ ಇತಿಹಾಸ, ತತ್ವ, ವ್ಯವಹಾರಗಳ ಬಗೆಗೆ ವ್ಯಾಖ್ಯಾನ ಕೊಡಲಿಕ್ಕೆ ನೇಮಿಸಲ್ಪಟ್ಟಿರುವನು.

# ೯ ಉಪಸಂಹಾರ

ಸಹಕಾರ ಚಳವಳಿಯು ಇಂದಿಗೆ ನೆದರ್ಲಂಡಿನಲ್ಲಿ ಸರ್ವವ್ಯಾಪಿಯೂ ಸರ್ವಶಕ್ತವೂ ಆಗಿದೆ. ಅದು ಒಕ್ಕಲಿಗರ ಜೀವನದ ಹಾಸು ಹೊಕ್ಕಾಗಿದೆ. ಇತರ ದೇಶಗಳಲ್ಲಿ ತನ್ನ ಸಲುವಾಗಿ ಇತರರು ಮಾಡುವ ಎಲ್ಲ ಕೆಲಸಗಳನ್ನು ವ್ಯವಹಾರಗಳನ್ನು ಅವನು ತನ್ನ ಸಹಕಾರಿ ಸಂಘಗಳ ಮುಖಾಂತರ ಮಾಡಿಕೊಳ್ಳುವನು. ಈ ಚಳವಳಿಯಿಂದ ದೇಶದ ಆರ್ಥಿಕ ರಚನೆಯೇ ಸಂಪೂರ್ಣವಾಗಿ ಪಲ್ಲಟಿಸಿದೆ. ಉತ್ಪಾದಕನಾಗಿ, ಮಾಲನ್ನು ರೂಪಾಂತರಗೊಳಿಸುವವನಾಗಿ, ವ್ಯಾಪಾರಿಯಾಗಿ, ವಿಮೆ ಇಳಿಸುವವನಾಗಿ ಬ್ಯಾಂಕಿನಲ್ಲಿ ಹಣ ಇಡುವ ಸಾಹುಕಾರನಾಗಿ ಜೀವನವನ್ನು ಸಾಗಿಸುವ ಹಾಗೆ ಈ ಚಳವಳಿಯು ಒಕ್ಕಲಿಗನಿಗೆ ನೆರವಾಗಿದೆ. ಅಲ್ಲದೆ ಕೆಲವೊಂದು ವಿಶಿಷ್ಟ ಜನರ ಕೈಯಲ್ಲಿ ದುಡ್ಡು ಕೂಡು ಬೀಳುವದಕ್ಕೂ ಗುತ್ತಿಗೆಯ ವ್ಯವಹಾರಕ್ಕೂ ಈ ಚಳವಳಿಯು ತಡೆಹಾಕಿದೆ. ಬಹು ಆಸ್ತಿಯ ಧನಾಢ್ಯ ಮಾಲಕನು ಮಿತವ್ಯಯದಿಂದ ಯೋಗ್ಯ ದೃಷ್ಟಿಯಿಂದ ಮಾಲನ್ನು ಖರೀದಿ ವಿಕ್ರಿ ಮಾಡುವಾಗ ಅವನಿಗೆ ಸಿಗುವ ಆರ್ಥಿಕ ಎಲ್ಲ ಸವಲತ್ತುಗಳೂ ಈ ಚಳವಳಿಯಿಂದ ಒಕ್ಕಲಿಗನಿಗೂ ಸಿಗುವಂತಾಗಿದೆ. ಕೊಡುಕೊಳ್ಳುವ ಯಾವದೇ ವ್ಯವಹಾರವನ್ನು ಒಕ್ಕಲಿಗರು ಸಂಘಟಿತರಾಗಿ, ಸಹಕಾರಿ ಸಂಘಗಳ ಮುಖಾಂತರವೇ ಮಾಡುತ್ತಾರೆ. ಆದುದರಿಂದ ಅವರಿಗೆ ಬಂಡವಾಳದ ಗುತ್ತಿಗೆಯ ಶಕ್ತಿಯಿರುವಂತೆಯೇ ವಿಷಯ ಪರಿಚಯದ ಜ್ಞಾನದ ಗುತ್ತಿಗೆಯೂ ಇರುವದು. ಉಳಿದ ದೇಶಗಳಲ್ಲಿಯ ದಲಾಲರು ಪಡೆಯುವ ಎಲ್ಲ ಲಾಭವೂ ಇಲ್ಲಿ ಒಕ್ಕಲಿಗರಿಗೇನೇ ಹೋಗುವದು. ಒಕ್ಕಲಿಗನು ತನ್ನ ವೈಯಕ್ತಿಕ ಹುಟ್ಟುವಳಿಯನ್ನು ಪೇಟೆಗೆ ಸಾಗಿಸಿ ಮಾರಾಟಮಾಡುವ ತೊಂದರೆ ವೆಚ್ಚ ಹೊಣೆಗಳಿಂದ ಮುಕ್ತನಾಗಿರುವನು. ಅದರಂತೆಯೇ ಹೊಲವನ್ನು ತನ್ನ ಕುಟುಂಬಕ್ಕೆ ಅವಶ್ಯವಿರುವ ಸಡಿ ಪದಾರ್ಥಗಳನ್ನು ಕೊಳ್ಳುವ ತೊಂದರೆಯಿಂದಲೂ ಭಾರದಿಂದಲೂ ಅವನು ಬಿಡುಗಡೆ ಹೊಂದಿರುವನು. ಸಹಕಾರಿ ಸಂಘಗಳೇ ಅವನ ಎಲ್ಲ ಆವಶ್ಯಕತೆಗಳನ್ನು ಪೂರೈಸುತ್ತಿರುವದರಿಂದ ಅವನ ಎಲ್ಲ ಹಿತಸಂಬಂಧಗಳನ್ನು ನೋಡಿಕೊಳ್ಳುತ್ತಿರುವದರಿಂದ, ಅವನನ್ನು ಸಂರಕ್ಷಿಸುವ ಹೊಣೆಯನ್ನು ಹೊರು

ತ್ತಿರುವದರಿಂದ ಒಕ್ಕಲಿಗನು ತನ್ನ ಎಲ್ಲ ವೇಳೆಯನ್ನು ಬೆಳೆಗಳನ್ನು ಬೆಳೆಯಿಸುವಲ್ಲಿ ಮತ್ತು ದನಕರುಗಳ ಸಂಗೋಪನೆ ಸಂವರ್ಧನೆಗಳಲ್ಲಿ ವಿನಿಯೋಗಿಸುತ್ತಿರುವನು. ಅಲ್ಲದೆ ಇದರಿಂದ ಒಕ್ಕಲಿಗನು ಸ್ವಾವಲಂಬಿಯೂ ಆತ್ಮವಿಶ್ವಾಸಿಯೂ ಆಗಿರುವನು. ಮತ್ತು ಒಕ್ಕಲಿಗನಲ್ಲಿ ಮಾನವಭಾವನೆಯೂ ಸ್ನೇಹವೂ ಬೆಳೆದು ಬಂದಿವೆ. ಅವನು ತನ್ನ ಉದ್ಯೋಗಗಳ ರೀತಿನೀತಿಗಳಲ್ಲಿ ನಿಪುಣನು ಅನುಭವಿಕನು ಆಗಿ, ಅವುಗಳನ್ನು ಸ್ವತಃ ನಿಯಂತ್ರಿಸುವಷ್ಟು ನೋಡಿಕೊಳ್ಳುವಷ್ಟು ಸಮರ್ಥನೂ ಆಗಿರುವನು.

ಈ ಮೇರೆಗೆ ನೆದರ್ಲಂಡಿನಲ್ಲಿಯ ಒಕ್ಕಲಿಗರಿಗೆ ಬೆಳೆಗಳನ್ನು ಬೆಳೆಯುವವರಿಗೆ ಸಹಕಾರವು ಅನೇಕ ರೀತಿಯಿಂದ ಕಲ್ಯಾಣವನ್ನುಂಟು ಮಾಡಿದೆ. ಸಹಕಾರದ ಮುಖಾಂತರವೇ ಒಕ್ಕಲಿಗನು ತನ್ನ ಬಲವನ್ನು ಬೆಳೆಯಿಸಿಕೊಂಡು ಸುಖಿಯೂ ಹಣವಂತನೂ ಆಗಿರುವನು. ಸುಲಿಗೆಗಳಿಂದ ಮುಕ್ತನಾಗಿ ತನ್ನ ದೈವವನ್ನು ತಾನೇ ಬರೆಯುವಷ್ಟು ಬಲಿಷ್ಠನಾಗಿರುವನು.

ಇಂದು ನಮ್ಮ ಭಾರತದಲ್ಲಿ ಕಂಡುಬರುವ ಪರಿಸ್ಥಿತಿಯೇ ಒಂದು ಶತಮಾನದ ಪೂರ್ವದಲ್ಲಿ ನೆದರ್ಲಂಡಿನಲ್ಲಿದ್ದಿತು. ನೆದರ್ಲಂಡಿನಲ್ಲಿಯ ಒಕ್ಕಲಿಗನು ಆಗ ಬಡವನೂ, ಸಂಘಟನಾ ಶಕ್ತಿಯಿಲ್ಲದವನೂ ಆಗಿದ್ದನು. ಅವನ ವಶದಲ್ಲಿರುವ ಜಮೀನುಗಳು ಸಣ್ಣ ಸಣ್ಣ ತುಂಡುಗಳಾಗಿದ್ದವು. ಅವನ ಸಂಪಾದನೆಯ ಶಕ್ತಿಯು ತೀರ ನಿಕೃಷ್ಟವಾಗಿದ್ದಿತು. ಭೂಮಿಯ ಮಣ್ಣು ಸತ್ವಹೀನವಾಗಿತ್ತು. ನಡುವೆ ದಲಾಲರ ಹಾವಳಿಗೆ ಸಿಕ್ಕು ಸುಲಿಗೆಗೊಳಗಾಗುತ್ತಿದ್ದನು. ಅವನು ತನ್ನಲ್ಲಿಯ ಚೇತನ, ಕರ್ತೃತ್ವಶಕ್ತಿ ಆಲೋಚನೆಗಳಿಂದ ಅಂತರಿಸಿದ್ದನು. ಅವನ ಪರಿಸ್ಥಿತಿಯು ಶೋಚನೀಯವೂ ಕರುಣಾಜನಕವೂ ಆಗಿದ್ದಿತು. ಆದರೆ ಉತ್ತಮ ಶಿಕ್ಷಣವೂ ಯಶಸ್ವಿಯಾದ ಸಂಘಟನೆಯೂ ಅವನ ಅಸಹಾಯ್ಯ ಪರಿಸ್ಥಿತಿ ಅಸಮರ್ಥತೆ ಅಡಚಣಿಗಳ ನರಕಕೂಪದಿಂದ ಆವನನ್ನೆತ್ತಿ ಶ್ರೇಷ್ಠನಾದ ಡಚ್ಚ ಒಕ್ಕಲಿಗನಾಗುವಂತೆ ಜೀವ ತುಂಬಿದವು. ಸಾವುಕಾರರ ಮತ್ತು ವ್ಯಾಪಾರಸ್ಥರ ಸಾಲದ ಶೂಲದಿಂದ, ಬಡ್ಡಿಯ ಮೊಸಳೆಯ ಹಿಡಿತದಿಂದ ಸಹಕಾರವು ಅವನನ್ನು ಮುಕ್ತಗೊಳಿಸಿತು ಶ್ರೇಷ್ಠತರಗತಿಯ ಕೃಷಿಯ ರಚನೆಗೆ ಸಹಕಾರವು ನೆರವಾಯಿತು.

ನೆದರ್ಲಂಡಿನ ಮತ್ತು ಹಿಂದುಸ್ಥಾನದ ಪರಿಸ್ಥಿತಿಯು ಬೇರೆ ಬೇರೆ ಎಂಬ ಮಾತು ನಿಜವಿದೆ. ಆ ದೇಶದಲ್ಲಿ ಒಕ್ಕಲುತನವು ಪ್ರಬಲವಾಗಿದೆ. ಪ್ರಗತಿಪರವಾಗಿದೆ. ಡಚ್ಚ ಒಕ್ಕಲಿಗನು ಸುಶಿಕ್ಷಿತನಿದ್ದು ಪ್ರಗತಿ ಪಥದಲ್ಲಿ ರುವನು. ಸಹಕಾರದ ಉಚ್ಚ ತತ್ವಗಳಿಂದ ಪ್ರೇರಿತನಾಗಿ ಸುಧಾರಣೆಯ ನೆಳಕಿನಲ್ಲಿರುವನು. ಅಲ್ಲದೆ ಸಂಸ್ಥಾನಿಷ್ಠೆಯು ಅವನ ಅಂಗಗುಣವಾಗಿದೆ. ಈ ಎಲ್ಲ ತಾರತಮ್ಯಗಳ ಅಂತರವನ್ನು ಬದಿಗಿರಿಸಿದರೂ, ಡಚ್ಚ ಒಕ್ಕಲಿಗ ರಿಂದ ಕಲಿಯಬಹುದಾದ ವಿಷಯಗಳು ಅನೇಕವಿವೆ.

೧) ಸಹಕಾರ ಚಳವಳಿಯು ಸ್ವಾವಲಂಬಿಯೂ ಸ್ವಯಂಪುಷ್ಟವೂ ಆಗಬೇಕು.

೨) ಸದಸ್ಯತ್ವದ ಮರ್ಯಾದೆಯು ಹೆಚ್ಚಾಗಬೇಕು. ಸಂಘವು ಉತ್ತಮ ಆರ್ಥಿಕ ರಚನೆಯ ಮೇಲೆ ನಡೆಯಬೇಕು.

೩) ದೋಷ ದೌರ್ಬಲ್ಯಗಳನ್ನು ತೊಡೆದು ಹಾಕಬೇಕು.

೪) ಸದಸ್ಯರು ತಮ್ಮ ತಮ್ಮ ಸಂಸ್ಥೆಗಳ ಬಗೆಗೆ ನಿಷ್ಠಾಭಾವನೆಯು ಳ್ಳವರಾಗಬೇಕು. ಮತ್ತು ತಮ್ಮ ಸಂಘಗಳ ಕಾರ್ಯಕಲಾಪಗಳಲ್ಲಿ ಹೆಚ್ಚಾಗಿ ಭಾಗವಹಿಸಬೇಕು. ಮತ್ತು ಸಂಘಗಳ ಬಗ್ಗೆ ಆತ್ಮೀಯ ಭಾವನೆಯುಳ್ಳ ವರಾಗಬೇಕು. ಸಂಘಗಳ ಸುಖ ದುಃಖ ಲಾಭಹಾನಿ ಪ್ರಗತಿ ಅವನತಿ ಎಲ್ಲವೂ ತನ್ನದೇ ಎಂದು ಭಾವಿಸಬೇಕು.

೫) ಸಹಕಾರಾಂದೋಲನದ ತಳಹದಿಯಾಗಿ ಕೆಲಸ ಮಾಡುತ್ತಿರುವ ಪ್ರಾಥಮಿಕ ಸಂಘಗಳ ಚಟುವಟಿಕೆಗಳಿಗೆ ಚಲನೆ ಕೊಡಲು .ಮಾರ್ಗ ದರ್ಶನ ಮಾಡಲು ವಿಕಾಸಗೊಳಿಸಲು ವ್ಯಾಪಾರೀ ಅದರಂತೆಯೇ ಬಿನ್ ವ್ಯಾಪಾರೀ ಸಂಯುಕ್ತ ಸಂಸ್ಥೆಗಳು ಸ್ಥಾಪಿತವಾಗಬೇಕು.

೬) ಸಹಕಾರದ ಕೆಲವೊಂದು ವಿಶಿಷ್ಟ ಅಂಗವಾಗಿ ಈ ಮೊದಲೇ ಕೆಲಸ ಮಾಡುತ್ತಿರುವ ಸಂಯುಕ್ತ ಸಂಸ್ಥೆಗಳು ಬೆಳೆಯುವಂತೆ ಬೆಳಗುವಂತೆ ಬಲವಂತವಾಗುವಂತೆ ಸುಶಿಕ್ಷಿತ ಮತ್ತು ಕರ್ತೃತ್ವಶಾಲಿಯಾದ ನೋಕರ ವರ್ಗದ ನೇತೃತ್ವದಲ್ಲಿ ಸರಿಯಾಗಿ ನಡೆಯುವಂತೆ ವ್ಯವಸ್ಥೆ ಮಾಡಬೇಕು.

೭) ವ್ಯವಸ್ಥಾಪಕ ಮಂಡಲವೂ ಅದರಂತೆ ನೋಕರವರ್ಗವೂ ಕರ್ತೃತ್ವಶಾಲಿಯೂ ಪ್ರಾಮಾಣಿಕವೂ, ಸಹಕಾರ ತತ್ವ ವ್ಯವಹಾರ ತಜ್ಞವೂ ಇರಬೇಕು.

೮) ವ್ಯಾಪಾರಿ ವರ್ಗದವರ ಸ್ಪರ್ಧೆಗೆ ಎದುರಾಳಿಯಾಗಿ ನಿಲ್ಲುವ ದೃಷ್ಟಿಯಿಂದ, ದೊಡ್ಡ ದೊಡ್ಡ ಪ್ರಮಾಣವಕಾರಖಾನೆ, ಗಿರಣಿ, ಉದ್ಯೋಗ, ವ್ಯವಹಾರಗಳ ಸಹಾಯ ಸೌಕರ್ಯ ಲಾಭಗಳನ್ನು ಪಡೆಯುವ ದೃಷ್ಟಿಯಿಂದ, ಆರ್ಥಿಕ ದುರ್ಬಲತೆಯ ಮೂಲಕ, ಹಣದ ಮತ್ತು ಜ್ಞಾನದ ಅಭಾವದ ಮೂಲಕ, ವೈಯಕ್ತಿಕ ಸಹಕಾರಿ ಸಂಘಗಳು ಕೈಕೊಳ್ಳಲಾರದ ಯೋಜನೆಗಳನ್ನು, ಚಟುವಟಿಕೆಗಳನ್ನು, ಕಾರ್ಯಕ್ರಮಗಳನ್ನು ಕೈಕೊಳ್ಳುವ ದೃಷ್ಟಿಯಿಂದ, ಸಾಧ್ಯವಿದ್ದಲ್ಲಿ, ಅಗತ್ಯವೆನಿಸಿದಲ್ಲಿ, ಸಹಕಾರಿ ಸಂಘಗಳ ಸಂಯೋಜನೆಯ ಏರ್ಪಾಡನ್ನು ಮಾಡಬೇಕು.

೯) ಅಗತ್ಯವೆನಿಸಿದಲ್ಲಿ, ಶಕ್ಯವಿದ್ದಲ್ಲಿ, ಸಹಕಾರಿ ಸಂಘಗಳ ಪರಿಪೂರ್ಣತೆಗಾಗಿ ಯತ್ನಿಸಬೇಕು.

೧೦) ವ್ಯಕ್ತಿ ವ್ಯಕ್ತಿಗಳು ತಮ್ಮ ವೈಯಕ್ತಿಕ ಹಿತವನ್ನು ಲಾಭವನ್ನು ಸಮಾಜದ ಸಲುವಾಗಿ, ಸಂಘದ ಸಲುವಾಗಿ ಧಾರೆಯೆರೆಯುವಂತೆ, ಜನತೆಯಲ್ಲಿ ಸಮಾಜ ಭಾವನೆಯೂ ಸ್ನೇಹ ಭಾವನೆಯೂ, ಸಹೋದರ ಭಾವನೆಯೂ ವಿಕಸಿತಗೊಳ್ಳುವಂತೆ ವ್ಯವಸ್ಥೆಯಾಗಬೇಕು.

೧೧) ಸಂಘಗಳು ತಮ್ಮ ಸದಸ್ಯರಲ್ಲಿರುವ ಹೆಚ್ಚಿನ ಹಣವನ್ನು ತಮ್ಮ ಕಡೆಗೆ ಆಕರ್ಷಿಸುವಂತೆ ಯತ್ನಿಸಬೇಕು. ಅದರಿಂದ ಅವು ತಮ್ಮ ಸ್ವಂತ ಬಂಡವಾಳವನ್ನು ಹೆಚ್ಚಿಸಿ, ಹೊರಗಣ ಆರ್ಥಿಕ ಸಹಾಯದ ಅವಶ್ಯಕತೆ ಬೀಳದಂತೆ, ಸ್ವತಂತ್ರವಾಗಬೇಕು. ಸ್ವಾವಲಂಬಿಯಾಗಬೇಕು.

೧೨) ಸಹಕಾರವು ಒಂದು ಸಂಸ್ಥೆಯ ಸೊತ್ತಾಗದಂತೆ, ಎಲ್ಲ ಕಡೆಗೂ ಹರಡುವಂತೆ, ತರುಣ ಪೀಳಿಗೆಯು ಸಹಕಾರ ಚಳವಳಿಯಲ್ಲಿ ವಿಶೇಷ ಆಸಕ್ತಿವಹಿಸುವಂತೆ ಶಿಕ್ಷಣದ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕು.

೧೩) ಒಕ್ಕಲಿಗನ ಸಾಮಾಜಿಕ ಮತ್ತು ಆರ್ಥಿಕ ಅವಶ್ಯಕತೆಗಳು ಪೂರೈಸುವಂತೆ ಏರ್ಪಾಡಾಗಬೇಕು. ಇದರಿಂದ ಸಂಘವೆಂದರೆ ತನ್ನ ಕಾಮಧೇನುವೆಂದೂ, ತನ್ನ ಸಾಮಾಜಿಕ ಆರ್ಥಿಕ ರೋಗ ರುಜಿನಗಳಿಗೆ, ತನ್ನ ಸಂಘದ ಹಿತಾಭಿವೃದ್ಧಿಗಳಲ್ಲಿಯೇ ಪರಿಹಾರೋಪಾಯವಿರುವದೆಂದೂ ಅವನು ಭಾವಿಸುವಂತಾಗಬೇಕು.

೧೪) ಸಹಕಾರ ಚಳವಳಿಗೆ ನೀತಿಯೇ ಭದ್ರವಾದ ತಳಹದಿಯಾಗಿರುವದರಿಂದ ನಾಗರಿಕತೆಯಲ್ಲಿ ರಾಜಕಾರಣದ ಜೀವನದಲ್ಲಿ, ಜನತೆಗೆ ಶಿಕ್ಷಣ ಕೊಡಲು, ಸಹಕಾರ ಚಳವಳಿಗೆ ಹೆಚ್ಚು ಶಕ್ಯವಿರುವದರಿಂದ, ಈ ಸಹಕಾ

ರವ ಮುಖಾಂತರ ಮನುಷ್ಯನಲ್ಲಿಯ ಶ್ರೇಷ್ಠ ಧೀರೋದಾತ್ತ ಗುಣಗಳು, ಸುಸ್ವಭಾವವೂ ವಿಕಾಸಗೊಳ್ಳುವಂತೆ, ವ್ಯಕ್ತವಾಗುವಂತೆ, ಸಾಕಷ್ಟು ಪ್ರಯತ್ನಗಳು ಸಾಗಬೇಕು.

ಇಷ್ಟೆಲ್ಲ ಮುಗಿದ ಮೇಲೆ, ನಾವು ನೆದರ್ಲಂಡಿನಿಂದ ಕಲಿಯತಕ್ಕ ವಿಷಯವೇನು ಎಂಬುದು ಕೇಳಬಹುದು. ಒಕ್ಕಲುತನದ ಅಭಿವೃದ್ಧಿಯೂ ಪ್ರಗತಿಯೂ ಮತ್ತು ಒಕ್ಕಲಿಗನ ಹಿತವೂ ಕೇವಲ ಸಹಕಾರದ ಮುಖಾಂತರವೇ ಸಾಧ್ಯವೆಂದೂ ಮತ್ತು ಒಕ್ಕಲಿಗನು ತನಗಾಗಿ ತಾನು ತನ್ನ ಉದ್ಧಾರಕ್ಕಾಗಿ ಯತ್ನಿಸಬೇಕಲ್ಲದೆ, ಎರಡನೆಯವರಿಗೆ ಸಹಾಯಕನೂ ತನ್ನ ಸಂಸ್ಥೆಗಳಿಗೆ ನಿಷ್ಠನೂ ಆಗಬೇಕೆಂದೂ ಇಲ್ಲದಿದ್ದರೆ, ಅವನ ಆರ್ಥಿಕ ಪುನರ್ರಚನೆಯ ಮತ್ತು ಸಮಾಜ ಸುಧಾರಣೆಯ ಆಶೆಯು ಬರಿ ಕನಸೆಂದೂ ಗಾಳಿಗೋಪುರವೆಂದೂ, ನೆದರ್ಲಂಡು ನಮಗೆ ಕೊಡುವ ಪಾಠವಿದು.

ಕೊನೆಯದಾಗಿ ನೆದರ್ಲಂಡಿನ ಸಹಕಾರ ಚಳವಳಿಯಲ್ಲಿ ಕಂಡುಬಂದ ಕೆಳಗಿನ ದೋಷಗಳೂ ಕೊರತೆಗಳೂ ಈ ದೇಶದಲ್ಲಿಯ ಸಹಕಾರ ಚಳುವಳಿಯ ಪ್ರಗತಿ ವಿಕಾಸಗಳಲ್ಲಿ ತಲೆ ಹಾಕದಂತೆ ನೋಡಿಕೊಳ್ಳಬೇಕು

೧) ಈ ದೇಶದಲ್ಲಿ ಸುದೃಢವಾದ ನಿರೋಗಿಯಾದ ವ್ಯಾಪಕವಾದ ಒಕ್ಕಲುತನದ ಸಹಕಾರವನ್ನು ಬೆಳೆಯಿಸಬೇಕಾದರೆ ಬೆಳಗಿಸಬೇಕಾದರೆ ಒಂದೇ ಸ್ಥಳದಲ್ಲಿ ಒಂದೇ ಬಗೆಯ ಉದ್ದೇಶವುಳ್ಳ ಒಂದೇ ಬಗೆಯ ಅಡಚಣಿ ಅವಶ್ಯಕತೆಗಳನ್ನು ಪೂರೈಸುವ ಎರಡು ಸಂಘಗಳು ಅಥವಾ ಒಂದು ಸಂಘದ ಇನ್ನೊಂದು ನಕಲು ಇರದಂತೆ ನೋಡಿಕೊಳ್ಳಬೇಕು.

೨) ಯೋಗ್ಯ ಕರ್ತೃತ್ವಶಾಲಿ ಜನರ ಅಭಾವವಿರದಿದ್ದಲ್ಲಿ, ಸಹಕಾರ ಚಳವಳಿಯ ವಿಕಾಸಕ್ಕಾಗಿ ಮತ್ತು ಜನತೆಯ ಅವಶ್ಯಕತೆಗಳ ಪೂರೈಕೆಗಾಗಿ, ವಿಶಿಷ್ಟ ಕಾರ್ಯಕ್ರಮಗಳನ್ನು ಕೈಕೊಳ್ಳುವ ಅಗತ್ಯವಿದ್ದಲ್ಲಿ ಭದ್ರವಾದ ಆರ್ಥಿಕ ತಳಹದಿಯ ಮೇಲೆ ಸಂಘವು ನಡೆಯಬಹುದಾಗಿದ್ದಲ್ಲಿ, ಒಕ್ಕಲಿಗನ ಒಂಟಿ ಅವಶ್ಯಕತೆಯನ್ನು ಪೂರೈಸಲಿಕ್ಕೆ ಒಂಟಿ ಉದ್ದೇಶದ ಸಂಘಗಳನ್ನು ಗ್ರಾಮಪ್ರದೇಶಗಳಲ್ಲಿ ಸ್ಥಾಪಿಸಬಹುದು.

೩) ಮಾನವತೆಯೇ ಧರ್ಮವಾದ ಸಹಕಾರದ ಕ್ಷೇತ್ರಗಳಲ್ಲಿ ಇತರ ಧರ್ಮಗಳು ಬರಕೂಡದು.

೪) ಸಹಕಾರವು ಒಂದು ವಿಶಿಷ್ಟ ಸಂಸ್ಥೆಯ ಸೊತ್ತಾಗಿರಕೂಡದು.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪ | ೨೨ | ೧೧೨ | ೧೧·೨ |
| ೯ | ೬ | ಸಂಸ್ದೆ | ಸಂಸ್ಥೆ |
| ೧೨ | ೨೦ | ಜನಂಖ್ಯೆ | ಜನಸಂಖ್ಯೆ |
| ೧೮ | ೬ | ಫತಿತ್ತೆ | ಫಲವತ್ತತೆ |
| ೧೮ | ೯ | ಹಳೆಯುದು | ಹಳೆಯದು. |
| ೨೦ | ೧೮ | ಪದಾರ್ಥಗಳು | ಪದಾರ್ಥಗಳನ್ನು |
| ೨೨ | ೯ | ಸಲುವಾಗಿ | ಸಲುವಾಗಿ. |
| ೨೪ | ೧೦ | ಸಿಮಿತಿ | ಸಮಿತಿ |
| ೨೪ | ೨೫ | ಜಬಾಬುದಾರಿಯು | ಜಬಾಬುದಾರಿಯು |
| ೨೫ | ೨೪ | ಕೊಳ್ಳುವದು | ಕೊಳ್ಳುವದು. |
| ೨೬ | ೨೩ | ಮೆರೆಯುತ್ತಿರುವರು | ಮೆರೆಯುತ್ತಿರುವರು. |
| ೨೭ | ೨೩,೨೪ | ಹದಿನೆಂಟನೆಯ ಮತ್ತು ಹತ್ತೊಂಬತ್ತನೇ ಶತಮಾನಗಳಲ್ಲಿ | ೧೮೮೦ ರಲ್ಲಿ |
| ೨೮ | ೨೧ | ಸ್ಥಾಪಿ | ಸ್ಥಾಪಿತ |
| ೩೨ | ೨೪ | ಮಧ್ಯವರ್ಥಿ | ಮಧ್ಯವರ್ತಿ |
| ೩೫ | ೧೦ | ದ್ದರು | ದ್ದರು. |
| ೩೬ | ೧೭ | ಬ್ಯಾಂಕುಗಳ | ಬ್ಯಾಂಕುಗಳು |
| ೩೬ | ೨೦ | ಸಭಾಸದನನ್ನಾಗಿ | ಸಭಾಸದರನ್ನಾಗಿ |
| ೩೯ | ೧೭ | ಮಿಃಗದ | ಮಿಕ್ಕದ |
| ೪೨ | ೩ | ೨ ರಂತೆ | ೨ಫಿ ರಂತೆ |
| ೪೨ | ೪ | ೨।೧೬ | ೨·೧೬ |
| ೪೨ | ೭ | ಸಸ್ಥೆಗಳಲ್ಲಿ | ಸಂಸ್ಥೆಗಳಲ್ಲಿ |
| ೪೪ | ೧೧ | ೨೪೩೭೦೦೦೦೦೦೦ | ೨೪೩೭೦೦೦೦೦೦೦ |
| ೪೪ | ೨೩ | ಸುಪಾರವಾಯಿಝುಂಗ | ಸುಪರವಾಯಿಝುಂಗ |
| ೪೫ | ೧ | ಕೆಂದ್ರ | ಕೇಂದ್ರ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪೫ | ೨೬ | ಸಾಮರ್ಥ್ಯ | ಸಾಮರ್ಥ್ಯ |
| ೫೦ | ೧೩ | ಜಾತಿಯು | ಜಾತಿಯು |
| ೫೧ | ೨೨ | ಅಂದರ | ಅಂದರೆ |
| ೫೫ | ೨೭ | ವಹಿಸಿದೆ | ವಹಿಸಿವೆ. |
| ೫೬ | ೨೩ | ಕರೆಯಿಸಿಕೊಂಡ | ಕರೆಯಿಸಿಕೊಂಡು |
| ೫೭ | ೧೨ | ಆಸ್ತಿಯು | ಆಸ್ತಿಯು |
| ೫೯ | ೨೪ | ಸಂಸ್ಥಾಪಿಸಿದು | ಸಂಸ್ಥಾಪಿಸಿದ್ದು |
| ೬೨ | ೧೩ | ಜಂಡಿಯಿಂದ | ಚಿಂತೆಯಿಂದ |
| ೬೨ | ೧೯ | ಕೊಳ್ಳುವದು | ಕೊಳ್ಳುವವು. |
| ೬೩ | ೨ | ವಳಿಗೆ | ಮಳಿಗೆ |
| ೬೩ | ೩ | ಆ್ಯಕ್ಸನ್ | ಆಕ್ಸನ್ |
| ೬೩ | ೬ | ಉಪಯೋಗಿಸಲ್ಪಡುತಿವೆ, | ಉಪಯೋಗಿಸಲ್ಪಡುತ್ತಿದೆ |
| ೬೩ | ೬ | ೩೦೭ ರಷ್ಟು | ೩.೭ ರಷ್ಟು |
| ೬೪ | ೧೬ | ದನ | ಅದನ್ನು |
| ೬೪ | ೨೭ | ಮಾಡಲು | ಮಾರಲು |
| ೬೬ | ೨೫ | ತೋರಿಸ್ಸಿ | ತೋರಿಸಿ |
| ೬೬ | ೨೪ | ಎಂಬುದನು | ಎಂಬುದನ್ನು |
| ೬೯ | ೨೮ | ಇರುವದು, | ಇರುವದು. ) |
| ೭೯ | ೧೮ | ವಠಾರಗಳೂ | ವಖಾರಗಳೂ |
| ೮೧ | ೯ | ಸರಾಸರಿಯ | ಸರಾಸರಿಯು |
| ೮೩ | ೧೫ | ಕಂಬಗಳು | ಕೂಟಗಳು |
| ೮೫ | ೧೧ | ದಳ್ಳಾಳಿ | ದಲ್ಲಾಲಿ |
| ೮೮ | ೨೮ | ಇದೊಂದೇ ? | ಇವೊಂದೇ ! |
| ೯೨ | ೨೨ | ಪಶುಗಳನ್ನು | ವಸ್ತುಗಳನ್ನು |
| ೯೩ | ೩ | ಹೆಡ್ | ರಾಡ್ |
| ೯೪ | ೯ | ಲೋಅರ್‌ಮಂಡ್ | ರೋಅರ್‌ಮಂಡ |
| ೯೪ | ೨೪ | ವಾಗಿದೆ. ಇದು | ವಾಗಿದೆ ಇದು. |